# ಗುಲಬರ್ಗಾ ಕೊಳಚೆ ಪ್ರದೇಶದ ಮಹಿಳಾ ಬದುಕು

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ. ಫಿಲ್ ಪದವಿಗಾಗಿ ಸಾದರಪಡಿಸಿದ ಸಂಪ್ರಬಂಧ)

ಸಂಶೋಧಕಿ
ಕಾವೇರಿ ಪಿ. ಸಾಗರ್

ಮಾರ್ಗದರ್ಶಕರು
ಡಾ ಶಿವಾನಂದ ಎಸ್ ವಿರಕ್ತಮಠ



ಭಾಷಾ ನಿಕಾಯ
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩.೨೭೬

೨೦೦೭

132

# ಗುಲಬರ್ಗಾ ಕೊಳಚೆ ಪ್ರದೇಶದ ಮಹಿಳಾ ಬದುಕು

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ ಸಾದರಪಡಿಸಿದ ಸಂಪ್ರಬಂಧ)


ಸಂಶೋಧಕರು

ಕಾವೇರಿ ಪಿ. ಸಾಗರ್





ಮಾರ್ಗದರ್ಶಕರು

ಡಾ.ಶಿವಾನಂದ ಎಸ್. ವಿರಕ್ತಮಠ





ಭಾಷಾ ನಿಕಾಯ

ಮಹಿಳಾ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೭

# ಮಾರ್ಗದರ್ಶಕರ ದೃಢೀಕರಣ ಪತ್ರ

**'ಗುಲಬರ್ಗಾ ಕೊಳಚೆ ಪ್ರದೇಶದ ಮಹಿಳಾ ಬದುಕು'** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಕಾವೇರಿ ಪಿ.ಸಾಗರ್ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಮಹಿಳಾ ಅಧ್ಯಯನ ವಿಭಾಗದಲ್ಲಿ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ : ೩೦.೦೭.೨೦೦೭

ಡಾ. ಶಿವಾನಂದ ಎಸ್. ವಿರಕ್ತಮಠ
ಪ್ರವಾಚಕರು
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

# ಸಂಶೋಧಕರ ಪ್ರಮಾಣ ಪತ್ರ

'ಗುಲಬರ್ಗಾ ಕೊಳಚೆ ಪ್ರದೇಶದ ಮಹಿಳಾ ಬದುಕು' ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಮಹಿಳಾ ಅಧ್ಯಯನ ವಿಭಾಗದಲ್ಲಿ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಡಾ.ಶಿವಾನಂದ ಎಸ್. ವಿರಕ್ತಮಠ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : ೩೦.೦೭.೨೦೦೭

KSagar

ಕಾವೇರಿ ಪಿ. ಸಾಗರ್

ಮಹಿಳಾ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ

## ಪರಿವಿಡಿ

# ಅಧ್ಯಾಯ : ಒಂದು

## ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವೈಧಾನಿಕತೆ

೧.೧ ಪ್ರಸ್ತಾವನೆ

೧.೨ ಅಧ್ಯಯನದ ಉದ್ದೇಶ

೧.೩ ಅಧ್ಯಯನದ ವ್ಯಾಪ್ತಿ

೧.೩.೧ ಅಧ್ಯಯನಕ್ಕಾಗಿ ಆಯ್ದುಕೊಂಡ ಕೊಳಚೆ ಪ್ರದೇಶಗಳು

೧.೪ ಅಧ್ಯಯನದ ವೈಧಾನಿಕತೆ

# ಅಧ್ಯಾಯ : ಒಂದು

## ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವೈಧಾನಿಕತೆ

### ೧.೧ ಪ್ರಸ್ತಾವನೆ

ಪುರುಷನೇ ಜಾಣನೇನಲ್ಲ ಎಲ್ಲ ಕಾಲದೊಳಗೆ
ಹೆಣ್ಣು ಜಾಣೆಯಾಗಿರುತ್ತಾಳೆ - ತುಸು ವೇಗದೊಳಗೆ
ಗಂಡೇ ವಿವೇಕಿಯೇನಲ್ಲ, ಎಲ್ಲ ಕಾಲಗಳಲ್ಲಿ
ಹೆಣ್ಣು ಹಾಗುನಿಸುವಳು - ಕ್ಷಣಕಾಲ ಚಿಂತಿಸಿದಲ್ಲಿ

-ಥೇರಿಗಾಥಾ

ಹೆಣ್ಣಿನ ಬುದ್ಧಿವಿಕಾಸ, ದೈಹಿಕ ಬಲವರ್ಧನೆಯನ್ನು ಈ ಸಮಾಜ ಎಂದೂ ಬಯಸಿಲ್ಲ. ಬುದ್ಧಿ ಬಲಿತರೇ ಪ್ರಶ್ನಿಸಬಲ್ಲಳೆಂದು ಅಕ್ಷರ ಕಲಿಕೆಯಿಂದಲೂ ದೂರವಿಟ್ಟಿತು. ದೇಹ ಬಲಿತರೆ ಪ್ರತಿಭಟಿಸ ಬಲ್ಲಳೆಂಬ ಭಯದಿಂದ ವ್ರತಾಚಾರಗಳನ್ನು ಹೇಳಿ ಉಪವಾಸಕ್ಕೆ ತೊಡಗಿಸಿತು."[೧]

ಹೆಣ್ಣು ಪ್ರತಿಯೊಂದು ಕಾಲಘಟ್ಟಗಳಲ್ಲಿಯೂ ಆಯಾ ಕಾಲಘಟ್ಟದ ಪುರುಷರಿಂದ ಶೋಷಣೆಗೆ ಒಳಗಾಗುತ್ತಲೇ ಬರುತ್ತಿದ್ದಾಳೆ. ಹೆಣ್ಣು ಬುದ್ಧಿವಂತಳಾಗಬಾರದೆಂದು ಶಿಕ್ಷಣದಿಂದ ದೂರವಿಟ್ಟ ಸಂಗತಿ ಸತ್ಯವೇ ಆಗಿದ್ದು, ಸಮಾಜ ಸುಧಾರಕರ ಪ್ರಬಲ ಹೋರಾಟದಿಂದ ಹೆಣ್ಣಿಗೂ ಕೂಡ ಶಿಕ್ಷಣ ಲಭಿಸುವಂತಾಯಿತು. ಆದರೂ ಕೂಡ ಶೋಷಣೆಯು ನಿರಂತರವಾಗಿ ನಡೆಯುತ್ತಲೇ ಬರುತ್ತಿದೆ. ಇತಿಹಾಸದುದ್ದಕ್ಕೂ ವಿವಿಧ ಧರ್ಮ, ಸಮಾಜಗಳ ವ್ಯವಸ್ಥೆಯಲ್ಲಿ ಮಹಿಳೆಯರ ಸ್ಥಿತಿಗತಿ ಇದೇ ಆಗಿದೆ. ಆಕೆಗೆ ಸಿಕ್ಕಿದ್ದೂ ಮನೆಯೊಳಗಿನ ಉಸ್ತುವಾರಿ. ಅವಳೇನಿದ್ದರೂ ಮನೆಯ ನಾಲ್ಕು ಗೋಡೆಗಳ ಮಧ್ಯೆ ಇದ್ದು, "ಗೃಹಿಣಿ ಗೃಹಮುಚ್ಚತೇ" ಎನ್ನುವಂತೆ ತನ್ನ ಗೃಹಿಣಿತ್ವದ ಪಾಲನೆಯನ್ನು ಮಾಡಿಕೊಂಡು ಹೋಗಬೇಕೆಂದು ಪುರುಷ ಪ್ರಧಾನ ವ್ಯವಸ್ಥೆ ಸದಾ ಬಯಸುತ್ತಲೇ ಬಂದಿದೆ. ಇಷ್ಟೇ ಅಲ್ಲದೇ ಅವಳ ಕೆಲಸ ಎಂದಿಗೂ ಗಂಡು ಮಾಡುವ ಕೆಲಸಕ್ಕೆ ಸಮಾನವಾಗಿರುವುದಿಲ್ಲವೆಂಬ ಪೂರ್ವಾಗ್ರಹಪೀಡಿತ ಅಭಿಪ್ರಾಯವಿರುವುದರಿಂದ ಅವಳ ದುಡಿಮೆಯನ್ನು ಉತ್ಪಾದಕತೆಯಿಂದ ದೂರವೇ ಇಡಲಾಗಿದೆ.

ಭಾರತ ಅನೇಕ ಧರ್ಮ, ಪಂಥ, ಜಾತಿಗಳಿಂದ ಕೂಡಿದ ದೇಶವಾಗಿದೆ. ಇಲ್ಲಿ "ಧರ್ಮ, ಪ್ರದೇಶ, ಕುಲ ಆಧಾರಗಳ ಮೇಲೆ ಸಾಂಸ್ಕೃತಿಕ ವೈಶಿಷ್ಟ್ಯಗಳನ್ನು ಗುರುತಿಸಲಾಗುತ್ತದೆ. ಇವುಗಳಲ್ಲಿ ಧರ್ಮ ಸರಿಯಾದ ಸೂಚನೆ ಕೊಡುವುದಿಲ್ಲ. ಒಂದು ನಿರ್ದಿಷ್ಟ ಧರ್ಮವನ್ನು ಅನುಸರಿಸುವವರಲ್ಲಿ

ನಂಬಿಕೆ, ಪೂಜಾ ವಿಧಾನಗಳು ಮತ್ತು ಆಚರಣೆಗಳು ಇವುಗಳ ಹೊರತು ಬೇರಾವುದೂ ಸಮಾನಾಂಶ ಅವುಗಳಲ್ಲಿ ಇಲ್ಲ. ಪೂಜಾ ವಿಧಾನ ಹಾಗೂ ಆಚರಣೆಗಳಲ್ಲಿ ಕೂಡಾ ಪಂಥಿಯ ಹಾಗೂ ಪ್ರಾದೇಶಿಕ ಭಿನ್ನತೆಗಳುಂಟು."[೨] ಈ ಭಿನ್ನತೆಗಳಿರುವು ದರಿಂದಾಗಿ ಅನೇಕ ಧರ್ಮ, ಜಾತಿ, ಉಪಜಾತಿಗಳಿಂದಾಗಿರುವುದರಿಂದ ವಿವಿಧತೆಯಲ್ಲಿ ಏಕತೆ ಎಂಬ ಅಂಶ ಕೇವಲ ಮೇಲ್ನೋಟಕ್ಕೆ ಮಾತ್ರ ಸರಿ ಏನಿಸುತ್ತದೆ.

ಇದು ಭಾರತ ದೇಶದಲ್ಲಿರುವ ವೈವಿಧ್ಯತೆ, ತಾರತಮ್ಯತೆಗೆ ಹಿಡಿದ ಕನ್ನಡಿಯಾದರೆ, ಇನ್ನೂ ಸ್ತ್ರೀ ಪುರುಷರ ವಿಷಯಕ್ಕೆ ಬಂದಾಗ ಅಲ್ಲಿಯೂ ಕೂಡ ಈ ತಾರತಮ್ಯವನ್ನು ಕಾಣುತ್ತೇವೆ. ಪುರುಷ ಶ್ರೇಷ್ಠನು, ಮಹಿಳೆ ಕನಿಷ್ಠಳು ಎನ್ನುವ ಧೋರಣೆ ಇಲ್ಲಿ ಬೇರೂರಿಬಿಟ್ಟಿದೆ. "ಸಿಮೋನದ ಬೋವಾ ಹೇಳುವಂತೆ ಪುರುಷನನ್ನು 'ಮನುಷ್ಯ' (Human being) ಎಂದೂ ಸ್ತ್ರೀಯನ್ನು 'ಹೆಣ್ಣು' (Female) ಎಂದೂ ಲಕ್ಷೀಕರಿಸಲಾಗುತ್ತದೆ. ಮಾನವಳಂತೆ ಆಕೆ ವರ್ತಿಸಲು ಯತ್ನಿಸಿದಾಗಲೆಲ್ಲಾ ಅದನ್ನು 'ಪುರುಷನೊಡನೆ ಸ್ಪರ್ಧಿಸುವ ಪ್ರಯತ್ನ'ವೆಂದು ನಿಂದಿಸಲಾಗುತ್ತದೆ."[೩] ಹೊರತು ಅವಳು ಕೂಡ ಮನುಷ್ಯಳೆಂದು ಸಮಾನತೆ ತೋರುವುದೇ ಇಲ್ಲ. "ಸ್ತ್ರೀ ಹಾಗೂ ಪುರುಷ ಇದು ಮಾನವನ ಎರಡು ರೂಪಗಳು. ಅವು ಇಂದು ಯಾವ ರೀತಿಯಲ್ಲಿ ಅಭಿವ್ಯಕ್ತವಾಗುತ್ತವೆಯೋ ಅದುವೇ ಸಾಂಸ್ಕೃತಿಕ ಸಂದರ್ಭದಲ್ಲೂ ವ್ಯಕ್ತವಾಗುತ್ತದೆ. ಅದು ಶತಮಾನಗಳ ಚರಿತ್ರೆಯ ಫಲಶ್ರುತಿಯಾಗಿದೆ ಎಂಬ ಶಾಸ್ತ್ರೀಯ ಸತ್ಯವನ್ನು ಮರೆಮಾಚುತ್ತದೆ. ಪ್ರಜೋತ್ಪಾದನೆಯ ಉದ್ದೇಶದಿಂದ ಸ್ತ್ರೀ ಹಾಗೂ ಪುರುಷ ಈ ಬಗೆಯ ವಿಷಮಲಿಂಗ ರೂಪಗಳನ್ನು ನಿಸರ್ಗವು ನಿರ್ಮಿಸಿದ್ದರೂ ಸ್ತ್ರೀ ಎಂದರೆ ಕನಿಷ್ಠಳು, ಪುರುಷ ಎಂದರೆ ಶ್ರೇಷ್ಠನು ಎಂಬ ಪರಿಕಲ್ಪನೆ ಮಾತ್ರ ಮಾನವ ನಿರ್ಮಿತವಾಗಿದೆ"[೪] ಎಂದು ಛಾಯಾ ದಾತಾರ್ ಅವರು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

ಸಮಾಜದಲ್ಲಿ ಪುರುಷ ಪ್ರಧಾನ ವ್ಯವಸ್ಥೆ ಎಂದಿನಿಂದ ಪ್ರಾರಂಭವಾಯಿತೋ ಅಂದಿನಿಂದಲೂ ಅದು ತನ್ನ ಪ್ರಭುತ್ವವನ್ನು ಮೆರೆಯುತ್ತಲೇ ಬಂದಿದೆ. ಪ್ರತಿಯೊಂದು ಕಾಲಘಟ್ಟದಲ್ಲಿಯೂ ಹೆಣ್ಣಿನ ವಿಷಯಕ್ಕೆ ಬಂದಾಗ ಅದು ಬಯಸಿದ್ದು 'ಹೆಣ್ಣಿನ ಮೌನ'ವನ್ನೆ. ಎಂ.ಎಸ್.ಆಶಾದೇವಿಯವರು ಹೀಗೆ ಬರೆಯುತ್ತಾರೆ "ಮೌನ ಪುರುಷ ಪ್ರಧಾನ ಸಮಾಜದ ಹೆಣ್ಣಿನ ಬಹು ಅಪೇಕ್ಷಿತ ಹಾಗೂ ನಿರೀಕ್ಷಿತ ಗುಣ. ಮೌನವೇ ಹೆಣ್ಣಿನ ಆಭರಣ ಎನ್ನುವುದನ್ನು ಶತಮಾನಗಳಿಂದಲೂ ಕಲಾತ್ಮಕವಾಗಿ ಹೆಣ್ಣಿನ ಮೇಲೆ ಹೇರಲಾಗಿದೆ. ಅವಳ ಸುಖ-ದುಃಖಗಳೆಲ್ಲ ಮೌನದಲ್ಲಿಯೇ ತುಂಬ ಶಕ್ತವಾಗಿ ಅಭಿವ್ಯಕ್ತವಾಗುತ್ತವೆ"[೫] ಎಂದಿದ್ದಾರೆ. ಹೆಣ್ಣು ಇತಿಹಾಸದ ಪ್ರತಿಯೊಂದು ಕಾಲಘಟ್ಟಗಳಲ್ಲಿ ಮೌನವನ್ನು ಅನುಸರಿಸುತ್ತಾ ಬಂದರೂ ಕೂಡ ಈ ವ್ಯವಸ್ಥೆಯಲ್ಲಿ ಹೆಣ್ಣಿನ ಬಗೆಗಿರುವ ಚಿಂತನೆಗಳು ಭಯಾನಕ ಸ್ವರೂಪವಾಗಿವೆ. ಮನಸ್ಮೃತಿಯಲ್ಲಿ ಮನು ಒಂದು ಕಡೆ ಹೀಗೆ ಬರೆಯುತ್ತಾನೆ "ಕಾಮ ಮತ್ತು ಕ್ರೋಧಗಳಿಗೆ ವಶನಾದ ಪಂಡಿತ ಮಾತ್ರವಲ್ಲದೆ ಪಾಮರನನ್ನು ಸ್ತ್ರೀಯು ವ್ರತಭ್ರಷ್ಟನನ್ನಾಗಿ

ಮಾಡಬಲ್ಲಳು"[4] ಎಂದು ಮಹಿಳೆಯ ಬಗೆಗಿನ ಈ ಪರಿಯ ಚಿಂತನೆಯನ್ನು ಮನು ಹೇಳಿದ್ದನ್ನು ಚಾಚುತಪ್ಪದೇ ಈ ಪುರುಷ ಪ್ರಧಾನ ವ್ಯವಸ್ಥೆ ಪಾಲಿಸಿಕೊಂಡು ಬರುತ್ತಲಿದೆ.

ಸನಾತನ ಕಾಲದಿಂದಲೂ ಶೋಷಿತಳಾಗಿರುವಂತಹ ಮಹಿಳೆಯ ಶೋಷಣೆಯ ಸ್ವರೂಪಗಳು ಭಿನ್ನವಾಗಿವೆ. ಶೋಷಣೆಗೆ ವರ್ಗದ ಕಲ್ಪನೆಯಿಲ್ಲ ಅದು ಮೇಲ್ವರ್ಗ, ಮಧ್ಯಮ ವರ್ಗ ಮತ್ತು ಕೆಳವರ್ಗದ ಮಹಿಳೆಯರ ಮೇಲೆ ನಿತ್ಯವೂ ನಡೆಯುತ್ತಿದೆ. ಅದು ದೈಹಿಕವಾದ ಶೋಷಣೆ ಆಗಿರಬಹುದು, ಇಲ್ಲವೇ ಮಾನಸಿಕ ಶೋಷಣೆಯಾಗಿರಬಹುದು ಒಟ್ಟಿನಲ್ಲಿ ಶೋಷಣೆಯನ್ನು ಎದುರಿಸುತ್ತಿದ್ದಾಳೆ. ಈ ಶೋಷಣೆಗೆ ಕೊಳಚೆ ಪ್ರದೇಶದ ಮಹಿಳೆಯರೂ ಹೊರತಾಗಿಲ್ಲ.

"ಕಲ್ಕತ್ತಾ, ಮುಂಬೈ, ದಿಲ್ಲಿ, ಮದ್ರಾಸ್ ಮುಂತಾದ ಮಹಾಪಟ್ಟಣಗಳಲ್ಲಿ ಜನವಸತಿಯು ಅನೇಕ ಗುಂಪುಗಳು ಕೊಳಗೇರಿಗಳ ಸೆಳೆತಕ್ಕೆ ಒಳಗಾಗಿವೆ. ಮದ್ರಾಸ್ ನಗರದಲ್ಲಿ ಏಳುವರೆ ಲಕ್ಷ ಜನರು ೧,೨೦೦ ಕೊಳಗೇರಿಗಳಲ್ಲಿ ವಾಸಿಸುತ್ತಿದ್ದಾರೆ. ಬೆಂಗಳೂರು ನಗರದಲ್ಲಿ ಸುಮಾರು ನಾಲ್ಕು ಲಕ್ಷ ಜನರು ೫೦೦ ಕೊಳಗೇರಿಗಳಲ್ಲಿ ವಾಸಿಸುತ್ತಿದ್ದಾರೆ. ಅನ್ಯ ನಗರಗಳಲ್ಲಿ ಬಸ್ತಿ, ಝೋಪಡಪಟ್ಟಿ ಮತ್ತು ಚಾಳಗಳಲ್ಲಿ ಜನವಸತಿ ಹೆಚ್ಚಾಗುತ್ತಿರುವುದು ಕಂಡುಬರುತ್ತದೆ."[5] ಕೊಳಗೇರಿಗಳು ಇಡೀ ವಿಶ್ವದ ಸಮಸ್ಯೆಯಾಗಿವೆ. ಅಭಿವೃದ್ಧಿಯ ಪಥದಲ್ಲಿ ಸಾಗುತ್ತಿರುವ ದೇಶಗಳಲ್ಲಿ ಈ ಕೊಳಗೇರಿಗಳು ಆ ದೇಶಗಳ ಅಸಭಿವೃದ್ಧಿಗೆ ಹಿಡಿದ ಕನ್ನಡಿಯಂತಾಗಿವೆ ಎಂಬುದನ್ನು ಅಲ್ಲಗಳೆಯುವಂತಿಲ್ಲ.

ಆಸ್ಕರ್‌ಲೂಯಿಸ್ ಹೇಳುವಂತೆ "'ದಾರಿದ್ರ್ಯ ಸಂಸ್ಕೃತಿ' (Culture of poverty) ಎಂಬ ಜೀವನ ಪದ್ಧತಿಯನ್ನು ಹುಟ್ಟಿಸಿದೆ. ಪಟ್ಟಣಗಳ ಕೊಳಗೇರಿಗಳಲ್ಲಿ ವಾಸಿಸುವ ಜನರು ವಿಶಾಲವಾದ ಸಮಾಜದ ಸಂಘ-ಸಂಸ್ಥೆಗಳ ಉಪಯೋಗವನ್ನು ಪಡೆಯಲು ಅಸಮರ್ಥರಾಗುವಂತಹ ದುರ್ಬಲ ಸ್ಥಿತಿಗೆ ಇಳಿದಾಗ ತಮಗೆ ಅನುಕೂಲವಾಗುವಂತಹ ಸಂಘ-ಸಂಸ್ಥೆಗಳನ್ನು ನಿರ್ಮಿಸಿಕೊಂಡು ತಾವು ಬಯಸಿದಾಗ ಅವುಗಳ ಮೊರೆ ಹೋಗುವಂತಹ ಸಂದರ್ಭ ಒದಗಿದಾಗ 'ದಾರಿದ್ರ್ಯ ಸಂಸ್ಕೃತಿ' ಹುಟ್ಟುತ್ತದೆ ಎಂದು ಅವರು ಹೇಳುತ್ತಾರೆ."[6]

ಈ ದಾರಿದ್ರ್ಯ ಸಂಸ್ಕೃತಿಯು ಅನೇಕ ಸಮಸ್ಯೆಗಳನ್ನು ಸೃಷ್ಟಿಸುತ್ತದೆ. ಹೆಣ್ಣುಮಕ್ಕಳ ಬಾಳನ್ನು ಅಸ್ತಿತ್ವರಹಿತವಾಗಿಸುತ್ತದೆ. ಈ ದಾರಿದ್ರ್ಯ ಸಂಸ್ಕೃತಿಯಿಂದಾಗಿಯೇ ದೇವರ ಹೆಸರಿನಲ್ಲಿ ಜೋಗತಿ ಬಿಡುವುದು, ಬೆತ್ತಲೆ ಸೇವೆಯಂಥ ಅನಿಷ್ಟ ಪದ್ಧತಿಗಳು, ಹೆಣ್ಣು ಭ್ರೂಣ ಹತ್ಯೆ ಮತ್ತು ಬಾಲ್ಯ ವಿವಾಹ ಪದ್ಧತಿಗಳು ಸೃಷ್ಟಿಯಾಗಿ ಹೆಣ್ಣುಮಕ್ಕಳ ಭವಿಷ್ಯವನ್ನು ನರಕಕ್ಕೆ ತಳ್ಳುತ್ತಲಿದೆ. ಈ ಎಲ್ಲ ಅನಿಷ್ಟ ಪದ್ಧತಿಗಳು ರೂಪುಗೊಂಡಿರುವ ಹಿನ್ನೆಲೆಯನ್ನು ಕುರಿತು ಚಿಂತಿಸಿದರೆ ಸಿಗುವ ಉತ್ತರ ಈ ವ್ಯವಸ್ಥೆಗೆ ಕಾರಣವಾದ ಪಿತೃಪ್ರಧಾನ ವ್ಯವಸ್ಥೆ ಎಂದೇ ಹೇಳಬಹುದು. ಪುರುಷನು ಧರ್ಮದ ಹೆಸರಿನಲ್ಲಿ ರೂಪಿಸಿದ ನೀತಿ ನಿಯಮಗಳನ್ನು ಚಾಚೂತಪ್ಪದೇ ಪಾಲಿಸಿಕೊಂಡು ಬರುವಂತೆ ಮಾಡಲಾಗಿದ್ದು ಹೆಣ್ಣಿನ ಮೇಲೆ ಪುರುಷ ಸಾಧಿಸಿದ ಪ್ರಭುತ್ವಕ್ಕೆ ಈ ಪದ್ಧತಿಗಳು ಸಾಕ್ಷಿಯಾಗಿ ನಿಲ್ಲುತ್ತವೆ.

ಈ ಪ್ರಭುತ್ವವು ಕೊಳಚೆ ಪ್ರದೇಶಗಳ ಮಹಿಳೆಯರ ಮೇಲೆಯೂ ತನ್ನ ಪ್ರಭಾವವನ್ನು ಬೀರಿದೆ. ದಿನಂಪ್ರತಿ ದುಡಿದು ಬರುವ ಮಹಿಳೆಯರು ಕೂಡ ತಮ್ಮ ಗಂಡಂದಿರಿಂದ ಮಾನಸಿಕ ಮತ್ತು ದೈಹಿಕ ಹಿಂಸೆಗೆ ಗುರಿಯಾಗುತ್ತಲೇ ಇದ್ದಾರೆ. ಮೇಲ್ವರ್ಗದ ಮಹಿಳೆಯರು ಸಾಮಾಜಿಕ ಸಂವಹನಕ್ಕೆ ಬಂದಿರುವುದರಿಂದ ಸಮಸ್ಯೆಗಳಿಂದ ಸ್ವಲ್ಪ ಮುಕ್ತಿ ದೊರೆತಿದೆ. ಆದರೆ ಶಿಕ್ಷಿತರಲ್ಲದ, ತಿಳಿವಳಿಕೆಯಿಲ್ಲದ, ಗಂಡಂದಿರಿಂದ ಶೋಷಣೆಯನ್ನು ಎದುರಿಸುತ್ತಿರುವ, ಸಾಮಾಜಿಕ ಸಂವಹನದಿಂದ ದೂರ ಉಳಿದಿರುವ ಕೊಳಚೆ ಪ್ರದೇಶಗಳ ಮಹಿಳೆಯರು ತೀರ ಸಂಕಷ್ಟಕ್ಕೆ ಸಿಲುಕಿದ ಜೀವನ ನಡೆಸುತ್ತಿದ್ದಾರೆ.

## ೧.೨ ಅಧ್ಯಯನದ ಉದ್ದೇಶ

* ಮಹಿಳೆಯು ಕುಟುಂಬ ಮತ್ತು ಸಮಾಜದಲ್ಲಿ ಅಸಮಾನತೆಯ, ತಾರತಮ್ಯದ ನೆಲೆಯಲ್ಲಿ ಬದುಕುತ್ತಿದ್ದಾಳೆ. ಮಹಿಳೆಯರಿಗಿರುವ ಸ್ಥಾನಮಾನ ಗೌಣವಾಗುತ್ತಿದೆ. ಈ ಗೌಣತೆಗೆ ಪ್ರಧಾನವಾಗಿರುವಂತಹ ಕಾರಣವಾಗಿರುವ ಅಂಶಗಳನ್ನು ಗುರುತಿಸುವುದು.

* ಸನಾತನ ಕಾಲದಿಂದಲೂ ಪುರುಷನ ನಿಯಂತ್ರಣದಲ್ಲಿರುವ ಮಹಿಳೆಯರು ಇಂದಿನ ದಿನಗಳಲ್ಲಿ ದುಡಿಯಲು ಹೊರ ಪ್ರಪಂಚಕ್ಕೆ ಬಂದಿದ್ದಾರೆ. ಅವರು ಹೊರ ಪ್ರಪಂಚಕ್ಕೆ ಕಾಲಿಟ್ಟಿದ್ದರೂ ಕೂಡ ಮನೆಯಲ್ಲಿ ಅವರ ಮೇಲೆ ನಿರಂತರವಾದ ಶೋಷಣೆ ನಡೆಯುತ್ತಲೇ ಇದೆ. ಈ ಶೋಷಣೆಯ ಮೂಲವನ್ನು ಕಂಡುಕೊಳ್ಳುವುದು.

* ಈ ಪ್ರದೇಶದಲ್ಲಿರುವ ಮಹಿಳೆಯರು ಮಾಡುವ ಉದ್ಯೋಗಗಳು ಯಾವವು, ಅವುಗಳಿಂದ ಅವಳು ಪಡೆಯುವ ಕೂಲಿ ಎಷ್ಟು, ಆ ಕೂಲಿಯನ್ನು ಹೇಗೆ ಖರ್ಚು ಮಾಡುತ್ತಾಳೆ, ಅವಳ ದುಡಿಮೆಯಿಂದ ಮನೆಯಲ್ಲಿ ಏನಾದರೂ ಬದಲಾವಣೆಗಳು ಆಗಿವೆಯೇ ಎಂಬುದನ್ನು ಕಂಡುಹಿಡಿಯುವುದು ಒಂದು ಉದ್ದೇಶವಾಗಿದೆ.

* ದುಡಿಮೆಯ ವಿಷಯಕ್ಕೆ ಬಂದಾಗ ಅಲ್ಲೂ ಮಹಿಳೆಯ ಮೇಲೆ ಶೋಷಣೆ ನಡೆಯುತ್ತಲೇ ಇದೆ. ಪುರುಷ ದುಡಿಮೆಗಾರರನ್ನು ಲಕ್ಷಿಸಿ, ಮಹಿಳಾ ದುಡಿಮೆಗಾರರನ್ನು ಕಡೆಗಣಿಸಲಾಗಿದೆ. ಮತ್ತು ಲಿಂಗಾಧಾರಿತ ಶ್ರಮವಿಭಜನೆಯು ಮಹಿಳೆಯರ ದುಡಿಮೆಯನ್ನು ಮತ್ತಷ್ಟು ಕಡೆಗಣಿಸುತ್ತಿದೆ. ಈ ರೀತಿಯಾದ ಲಿಂಗಾಧಾರಿತ ಶ್ರಮವಿಭಜನೆಗೆ ಕಾರಣವಾಗಿರುವ ಅಂಶಗಳನ್ನು ಕಂಡು ಹಿಡಿಯುವುದು.

* ಕೊಳಚೆ ಪ್ರದೇಶಗಳಲ್ಲಿರುವ ಮಹಿಳೆಯರು ಎದುರಿಸುವ ಸಮಸ್ಯೆಗಳು ಅನೇಕ, ಅದು ಸಾಮಾಜಿಕವಾಗಿರಬಹುದು, ಆರ್ಥಿಕವಾಗಿರಬಹುದು, ಇಲ್ಲವೇ ಆರೋಗ್ಯದ ಸಮಸ್ಯೆ ಯಾಗಿರಬಹುದು, ಇದೆಲ್ಲದರ ಪರಿಣಾಮ ಅಂತಿಮವಾಗಿ ಮಹಿಳೆಯೇ ಎದುರಿಸುತ್ತಾಳೆ ಎಂಬುದನ್ನು ಸೂಕ್ಷ್ಮವಾಗಿ ಗ್ರಹಿಸಿ ಸಮಗ್ರವಾಗಿ ಕೊಳಚೆ ಪ್ರದೇಶಗಳ ಅಧ್ಯಯನವನ್ನು ಕೈಗೊಂಡು, ನಿರ್ದಿಷ್ಟವಾಗಿ ಗೊತ್ತುಪಡಿಸಿದ ಪ್ರದೇಶಗಳ ಅಧ್ಯಯನ ಮಾಡುವುದು ಈ ಅಧ್ಯಯನದ ಉದ್ದೇಶವಾಗಿದೆ.

## ೧.೩ ಅಧ್ಯಯನದ ವ್ಯಾಪ್ತಿ

ಈ ಸಂಪ್ರಬಂಧದ ಕಾರ್ಯಕ್ಷೇತ್ರದ ವ್ಯಾಪ್ತಿಯನ್ನಾಗಿ ಗುಲಬರ್ಗಾ ನಗರವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ನಗರದಲ್ಲಿರುವ ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿಯಿಂದ ೫೨ ಘೋಷಿತ ಕೊಳಚೆ ಪ್ರದೇಶಗಳು ಮತ್ತು ೨೬ ಅಘೋಷಿತ ಕೊಳಚೆ ಪ್ರದೇಶಗಳಿದ್ದು, ಸುಮಾರು ೭೮ ಕೊಳಚೆ ಪ್ರದೇಶಗಳು ಗುಲಬರ್ಗಾ ನಗರದಲ್ಲಿಯೇ ಇವೆ. ಅವುಗಳಲ್ಲಿ ಅಧ್ಯಯನದ ಅನುಕೂಲಕ್ಕಾಗಿ ಮುಖ್ಯವಾಗಿ ಐದು ಕೊಳಚೆ ಪ್ರದೇಶಗಳನ್ನು ಮಾತ್ರ ಅಧ್ಯಯನಕ್ಕಾಗಿ ಆಯ್ದುಕೊಳ್ಳಲಾಗಿದೆ.

| | |
|---|---|
| ಘೋಷಿತ ಕೊಳಚೆ | ಪ್ರದೇಶಗಳು ೫೨ |
| ಅಘೋಷಿತ ಕೊಳಚೆ | ಪ್ರದೇಶಗಳು ೨೬ |
| | ಒಟ್ಟು ೭೮ |

### ೧.೩.೧ ಅಧ್ಯಯನಕ್ಕಾಗಿ ಆಯ್ದುಕೊಂಡ ಕೊಳಚೆ ಪ್ರದೇಶಗಳು

ಗುಲಬರ್ಗಾ ಕೊಳಚೆ ಪ್ರದೇಶ ನಿರ್ಮೂಲನಾ ಮಂಡಳಿಯು ಗುಲಬರ್ಗಾ ನಗರದಲ್ಲಿ ಒಟ್ಟು ೫೨ ಪ್ರದೇಶಗಳನ್ನು ಕೊಳಚೆ ಪ್ರದೇಶಗಳೆಂದು ಘೋಷಣೆ ಮಾಡಲಾಗಿದೆ. ಘೋಷಣೆ ಮಾಡಿರುವಂತಹ ಎಲಾ ಕೊಳಚೆ ಪ್ರದೇಶಗಳನ್ನು ಗಮನಿಸಿ, ಅಧ್ಯಯನದ ಮಿತಿಗಾಗಿ ಮತ್ತು ಅನುಕೂಲಕ್ಕಾಗಿ ಐದು ಕೊಳಚೆ ಪ್ರದೇಶಗಳನ್ನು ಆಯ್ದುಕೊಂಡಿದ್ದೇನೆ. ಈ ಪ್ರದೇಶಗಳ ಬಗ್ಗೆ ಸಾಮಾಜಿಕ, ಆರ್ಥಿಕ, ಆರೋಗ್ಯ ಮತ್ತು ಶೈಕ್ಷಣಿಕವಾದ ಅಧ್ಯಯನವನ್ನು ಕೈಗೊಳ್ಳಲು ಆಯ್ಕೆ ಮಾಡಿಕೊಂಡಿದ್ದೇನೆ. ಅಧ್ಯಯನಕ್ಕಾಗಿ ಆಯ್ದುಕೊಂಡಿರುವ ಕೊಳಚೆ ಪ್ರದೇಶಗಳನ್ನು ಕೆಳಗಿನಂತೆ ಹೆಸರಿಸಲಾಗಿದೆ.

೧. ಬುದ್ಧ ನಗರ

೨. ಇಂದಿರಾ ನಗರ

೩. ಜಿಲಾನಾಬಾದ

೪. ಹೀರಾಪೂರ

೫. ಡಾ.ಬಿ.ಆರ್.ಅಂಬೇಡ್ಕರ್ ಆಶ್ರಯ ಕಾಲೋನಿ

ಈ ಪ್ರದೇಶಗಳ ಮಹಿಳೆಯರ ಬದುಕು ಕೌಟುಂಬಿಕ ಪರಿಸರ, ಕುಟುಂಬದ ಆದಾಯ 'ದುಡಿಮೆ' ಯಾವ ರೀತಿ ಇದೆ. ಅವರು ಮಾಡುವಂತಹ ದುಡಿಮೆಗಳಾವವು, ಅವರ ಸಾಕ್ಷರತೆ, ಜಾತಿವಾರು ಈ ವಿಷಯಗಳ ಕುರಿತು ಪ್ರಶ್ನಾವಳಿಯನ್ನು ರಚಿಸಿ, ಸಂದರ್ಶನ ಸೂಚಿಯ ಮೂಲಕ ಮಹಿಳೆಯರನ್ನು ಸಂದರ್ಶಿಸಿ, ಸಂದರ್ಶನದಲ್ಲಿ ದೊರೆತ ಮಾಹಿತಿಯನ್ನು ಅಂಕಿ-ಅಂಶಗಳ ಮೂಲಕ ಚರ್ಚಿಸಿ ಕೋಷ್ಟಕ ರೂಪದಲ್ಲಿ ನೀಡಲಾಗಿದೆ. ಪುರುಷರೊಂದಿಗೆ ದುಡಿಯುವ ಮಹಿಳೆಯರಿಗೆ ಆರ್ಥಿಕ ಸ್ವಾವಲಂಬನೆ

ಇಲ್ಲದಿರುವುದು ಕಂಡು ಬರುತ್ತದೆ. ಆದ್ದರಿಂದ ಈ ಸಂಶೋಧನೆಗೆ ಗುಲಬರ್ಗಾ ನಗರ ಪ್ರದೇಶವನ್ನು ಕೇಂದ್ರವಾಗಿಟ್ಟುಕೊಂಡು ಅಲ್ಲಿ ಬರುವ ಕೊಳಚೆ ಪ್ರದೇಶಗಳಲ್ಲಿನ, ದುಡಿಯುವ ಮಹಿಳೆಯರ ಬದುಕಿನ ಅಧ್ಯಯನ ಮಾಡುವ ಅಗತ್ಯ ಇರುವುದರಿಂದ ನಿರ್ದಿಷ್ಟ ವ್ಯಾಪ್ತಿಗೊಳಪಡಿಸಿ ಅಧ್ಯಯನ ಕೈಗೊಳ್ಳಲಾಗಿದೆ.

### ೧. ಬುದ್ಧ ನಗರ

ಈ ನಗರವನ್ನು ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿಯು ೧೯೭೫ರಲ್ಲಿ ಕೊಳಚೆ ಪ್ರದೇಶವೆಂದು ಘೋಷಿಸಿತು. ಘೋಷಣೆ ಮಾಡುವಾಗ ಇದ್ದ ಜನಸಂಖ್ಯೆ ಕಡಿಮೆ ಇದ್ದು ಈಗ ಹೆಚ್ಚಾಗಿದೆ. ಒಟ್ಟು ಜನಸಂಖ್ಯೆ ೪೪೪ ಇದೆ. ಈ ನಗರದಲ್ಲಿ ಪರಿಶಿಷ್ಟ ಜಾತಿಯ ೩೫೦, ಪರಿಶಿಷ್ಟ ಪಂಗಡದ ೫೪ ಮತ್ತು ಇತರೆ ವರ್ಗಕ್ಕೆ ಸೇರಿದವರು ೪೦, ಹೀಗೆ ಆಯಾ ವರ್ಗದ ಜನರು ಈ ಪ್ರದೇಶದಲ್ಲಿ ವಾಸಿಸುತ್ತಾರೆ. ಇಲ್ಲಿ ವಾಸಿಸುವ ಜನರಲ್ಲಿ ಪರಿಶಿಷ್ಟಜಾತಿಗೆ ಸೇರಿದ ಜನರೇ ಅಧಿಕ ಸಂಖ್ಯೆಯಲ್ಲಿದ್ದಾರೆ.

| ಕ್ರ.ಸಂ. | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಇತರೆ | ಒಟ್ಟು |
|---|---|---|---|---|
| ೧ | ೩೫೦ | ೫೪ | ೪೦ | ೪೪೪ |

ಈ ನಗರಕ್ಕೆ ಕ್ಷೇತ್ರಕಾರ್ಯಕ್ಕೆಂದು ಹೋದಾಗ, ಇಲ್ಲಿರುವ ಅಸ್ತವ್ಯಸ್ಥವಾದಂಹ ಚರಂಡಿಗಳು, ವ್ಯವಸ್ಥಿತವಾಗಿ ನಿರ್ಮಾಣ ಮಾಡದ ರಸ್ತೆಗಳು, ರಸ್ತೆಗಳು ನಿರ್ಮಿಸಿದ ಕೆಲವೇ ಕೆಲವು ತಿಂಗಳವರೆಗೆ ಚೆನ್ನಾಗಿದ್ದು, ಮತ್ತೆ ಮೊದಲಿನ ಸ್ಥಿತಿಗೆ ಬಂದುಬಿಡುತ್ತವೆ, ಹಿಂದೊಮ್ಮೆ ಇಲ್ಲಿ ಒಳ್ಳೆಯ ರಸ್ತೆಯನ್ನು ನಿರ್ಮಾಣ ಮಾಡಲಾಗಿತ್ತಾ ಎಂಬ ಸಂಶಯವು ಬಂದುಬಿಡುತ್ತದೆ, ಆ ಸ್ಥಿತಿ ಇಲ್ಲಿಯ ರಸ್ತೆಗಳಿಗಿವೆ. ಕೊಳಚೆ ನಿರ್ಮೂಲನ ಮಂಡಳಿಯ ವತಿಯಿಂದ ಮನೆಗಳನ್ನು ಕಟ್ಟಿಕೊಡಲಾಗಿದೆ. ವಿದ್ಯುತ್ ದೀಪಗಳ ವ್ಯವಸ್ಥೆಯನ್ನು ಮಾಡಿಕೊಡಲಾಗಿದೆ. ಹೀಗಿದ್ದರೂ ಕೂಡ ಇಲ್ಲಿ ೭೫ ಗುಡಿಸಲುಗಳು ಇರುವುದನ್ನು ಕಾಣುತ್ತೇವೆ. ಈ ಪ್ರದೇಶದಲ್ಲಿರುವವರೆಲ್ಲರೂ ದುಡಿದು ತಿನ್ನುವ ಜನರೇ ಆಗಿದ್ದು, ಹಿರಿಯರಿಂದ ಹೇಳಿಕೊಳ್ಳುವಂತಹ ಆಸ್ತಿಪಾಸ್ತಿಯನ್ನು ಮಾಡಿಟ್ಟಿಲ್ಲ. ತಾವು ದುಡಿದು ತರುವ ಕೂಲಿಯಲ್ಲಿ ಮನೆಯ ಜನರ ಹೊಟ್ಟೆ ತುಂಬುವುದೇ ಕಷ್ಟವಾಗಿರುವ ಸಂದರ್ಭದಲ್ಲಿ ಭವಿಷ್ಯತ್ತಿಗಾಗಿ ಹಣವನ್ನು ಉಳಿಸುವುದು ಕನಸಿನ ಮಾತೇ ಆಗಿದೆ.

ಈ ಪ್ರದೇಶದಲ್ಲಿ ವಾಸಿಸಲು ಮನೆಗಳು ತುಂಬಾ ಚಿಕ್ಕದಾಗಿರುವುದರಿಂದ ಮನೆಯಲ್ಲಿರುವ ಎಲ್ಲ ಸದಸ್ಯರಿಗೆ ಸ್ಥಳಾಭಾವದ ಮೂಲಕ ಅನೇಕರು ತಮ್ಮ ನಿತ್ಯ ವ್ಯವಹಾರಗಳನ್ನು ಮನೆಯ ಹೊರಗಡೆ ಮಾಡುವವರು, ಹರಕು ಹಾಸಿಗೆ, ಮುರುಕಲು ಹೊರಸು, ಮಂಚ ಹಾಕಿ ರಾತ್ರಿ ಮಲಗುತ್ತಾರೆ. ಇಲ್ಲವೇ ಇವರಿಗೆ ರಾತ್ರಿ ಕಳೆಯಲು ಸಮುದಾಯ ಭವನವೇ ಗತಿಯಾಗಿದೆ.

ಈ ಪ್ರದೇಶದಲ್ಲಿ ಎರಡು ಪ್ರಾಥಮಿಕ ಶಾಲೆಗಳು, ಒಂದು ಅಂಗನವಾಡಿ ಕೇಂದ್ರವಿದೆ. ಪ್ರಾಥಮಿಕ ಶಾಲೆಗಳಿಗೆ ತಮ್ಮ ಮಕ್ಕಳನ್ನು ದಿನವೂ ಕಳುಹಿಸುತ್ತಾರೆ. ತಾವು ಅನಕ್ಷರಸ್ಥರಾದ ಕಾರಣದಿಂದ ತಮ್ಮ ಮಕ್ಕಳು ಓದಿ ನಾಲ್ಕು ಅಕ್ಷರ ಕಲಿತು ಮುಂದೆ ಒಳ್ಳೆ ಹುದ್ದೆಯನ್ನು ಪಡೆದು ಮುಂದೇ ಬರಲಿ ಎಂಬುವುದು ತಂದೆ ತಾಯಿಗಳ ಆಶಯವಾಗಿದೆ. ತಂದೆ ತಾಯಿಗಳ ಈ ಆಶಯ ಆಶಯವಾಗಿಯೇ ಉಳಿದಿದೆ. ಏಕೆಂದರೆ, ಮನೆಯಿಂದ ಶಾಲೆಗೆ ಹೋಗುತ್ತೇವೆಂದು ಹೊರಟ ಮಕ್ಕಳು ಶಾಲೆಗೆ ಹೋಗದೇ, ಹೆಚ್ಚು ಕಡಿಮೆ ತಮ್ಮದೇ ವಯಸ್ಸಿನವರಾದ ಮಕ್ಕಳ ಗುಂಪೊಂದನ್ನು ಕಟ್ಟಿಕೊಂಡು, ಬಡಾವಣೆಗಳಿಂದ ಬಡಾವಣೆಗಳಿಗೆ ಸುತ್ತುವುದು, ಉದ್ಯಾನವನಗಳನ್ನು ಸುತ್ತುವುದು, ಚಿಕ್ಕ ವಯಸ್ಸಿನಲ್ಲಿಯೇ ಬೀಡಿ, ಸಿಗರೇಟು ಸೇದುವುದು, ಗುಟ್ಕಾ, ಜರ್ದಾ, ತಂಬಾಕು ಸೇವಿಸುವುದನ್ನು ಕಲಿತುಕೊಳ್ಳುತ್ತಾರೆ. ಇವರು ಇನ್ನು ಚಿಕ್ಕವರಾಗಿದ್ದರಿಂದ ಈ ಪ್ರಾಥಮಿಕ ದುಶ್ಚಟಗಳಿಗೆ ದಾಸರಾಗಿರುತ್ತಾರೆ, ಇವರು ಮುಂದೆ ಬೆಳೆದು ದೊಡ್ಡವರಾದ ಮೇಲೆ ಕುಡಿತ, ಜೂಜಾಟ, ಕಳ್ಳತನ, ದರೋಡೆ, ಕೊಲೆ ಇಂತಹ ಕೃತ್ಯಗಳಲ್ಲಿ ತೊಡಗಿಕೊಳ್ಳುತ್ತಾರೆ. ಮೋಜಿನ ಹೆಸರಿಗಾಗಿ ಪ್ರಾರಂಭವಾದ ಈ ಚಟಗಳು ಬೃಹದಾಕಾರವಾಗಿ ಬೆಳೆದು ವ್ಯಕ್ತಿಯ ಅವನತಿಯಲ್ಲದೆ, ಸಮಾಜಕ್ಕೆ ಗಂಡಾಂತರವನ್ನು ತಂದಿಡುತ್ತಾರೆ. ಈ ಮಕ್ಕಳು ಯುವಕರಾದ ಮೇಲೆ ಸಮಾಜದ್ರೋಹಿ ಭಾವನೆಗಳನ್ನು ಬೆಳಸಿಕೊಂಡು, ಸಮಾಜದ ನೈತಿಕ ಮೌಲ್ಯ, ಕಾಯ್ದೆ ಕಟ್ಟಳೆಗಳನ್ನು ಉಲ್ಲಂಘಿಸುವುದು, ರಸ್ತೆಯ ಮೇಲೆ ಹೊಡೆದಾಟ ಬಡಿದಾಟಕ್ಕಿಳಿಯುವುದು, ಸಾರ್ವಜನಿಕ ಆಸ್ತಿ-ಪಾಸ್ತಿ ಹಾಳು ಮಾಡುವುದೂ, ಮುಷ್ಕರ ಮುಂತಾದವುಗಳಲ್ಲಿ ತೊಡಗಿ ಸಾಮಾಜಿಕ ಸ್ವಾಸ್ಥ್ಯವನ್ನು ಕೆಡಿಸುವವರು ಈ ಪ್ರದೇಶದ ಜನರೇ ಆಗಿರುತ್ತಾರೆ. ಇದು ಸಾಮಾನ್ಯವಾಗಿ ಎಲ್ಲ ಕೊಳಚೆ ಪ್ರದೇಶಗಳಲ್ಲಿರುವಂತಹ ಸಾಮಾಜಿಕ ಸ್ಥಿತಿಯೇ ಆಗಿದೆ.

## ಆರೋಗ್ಯದ ಸ್ಥಿತಿ

ಈ ಪ್ರದೇಶದ ಆರೋಗ್ಯದ ಸ್ಥಿತಿಯ ವಿಷಯಕ್ಕೆ ಬಂದರೆ, ಮಕ್ಕಳಿಂದ ಹಿಡಿದು ವಯೋವೃದ್ಧರವರೆಗೂ ಕಾಯಿಲೆಗಳನ್ನು ಎದುರಿಸುವವರೆ ಆಗಿದ್ದಾರೆ. ಈ ಪ್ರದೇಶದಲ್ಲಿ ಸ್ವಸ್ಥವಾಗಿರುವಂತಹ, ಆರೋಗ್ಯವಂತ ಜನರನ್ನು ಕಾಣುವುದು ಕಡಿಮೆ. ಮಹಿಳೆಯರಾದರೂ, ಬಸಿರು, ಬಾಣಂತನ, ತಿಂಗಳ ಸಮಸ್ಯೆ, ಹೀಗೆ ಒಂದಿಲ್ಲ ಒಂದು ಆರೋಗ್ಯದ ಸಮಸ್ಯೆಯಿಂದ ಬಳಲುತ್ತಲೇ ಇರುತ್ತಾರೆ. ಇವರಿಗೆ, ಮಕ್ಕಳು ಹೆರುವುದೇ ಒಂದು ದುಡಿಮೆಯಾಗಿ ಬಿಟ್ಟಿದೆ. ವರ್ಷದಲ್ಲಿ ಒಂದು ಮಗು ಎನ್ನುವ ಅಲಿಖಿತ ನಿಯಮ ಈ ಪ್ರದೇಶದ ಮಹಿಳೆ ಮತ್ತು ಪುರುಷರು ಪಾಲಿಸುತ್ತಿದ್ದಾರೆ. ಕುಟುಂಬ ಯೋಜನೆಯ ಬಗ್ಗೆ ಸರಿಯಾದ ಮಾಹಿತಿ ಇಲ್ಲದ ಪತಿ, ಮಕ್ಕಳು ದೇವರು ಕೊಟ್ಟ ವರವೆಂದು, ಒಂದು ವೇಳೆ ತಾವೇನಾದರೂ ಮಕ್ಕಳಾಗುವುದನ್ನು ನಿಲ್ಲಿಸಿದರೆ ದೇವರು ತಮಗೆ ಶಾಪ ಕೊಡುತ್ತಾನೆ ಎನ್ನುವ ಪೂರ್ವಾಗ್ರಹಪೀಡಿತವು ಇವರ ತಲೆಯಲ್ಲಿರುವುದರಿಂದ ಮನೆತುಂಬ ಮಕ್ಕಳು, ಹೀಗೆ ಮಕ್ಕಳನ್ನು ಹೆರುತ್ತಾ ಹೋಗುವ ಹೆಣ್ಣಿನ ದೇಹ ಏನಾಗಬಾರದು, ಆಕೆ ಕೇವಲ ಗಂಡನ ಭೋಗದ ವಸ್ತು, ಮಕ್ಕಳನ್ನು ಹೆರುವ ಯಂತ್ರ, ಇಂಥದರ ಮಧ್ಯೆ ಮನೆಯ ಜವಾಬ್ದಾರಿಗಳು ಮಹಿಳೆಯನ್ನು ತೀರಾ

ಅನಾರೋಗ್ಯಳನ್ನಾಗಿ ಮಾಡಿಬಿಟ್ಟಿವೆ. ಗರ್ಭಿಣಿಯರಾಗಿದ್ದಾಗ ಪೌಷ್ಟಿಕವಾದ ಆಹಾರದ ಕೊರತೆಯಿಂದ, ಸರಿಯಾದ ಚಿಕಿತ್ಸೆಯಿಲ್ಲದೇ ಅನೇಕ ಗರ್ಭಿಣಿಯರು ಸಾವನ್ನಪ್ಪಿದ, ಹೊಟ್ಟೆಯಲ್ಲಿ ಮಗು ಸರಿಯಾಗಿ ಬೆಳೆಯದೇ ಸಾವನ್ನಪ್ಪಿದ ಉದಾಹರಣೆಗಳಿಗೆ ಇಲ್ಲಿ ಕೊರತೆ ಇಲ್ಲ. ಅದೇ ರೀತಿಯಾಗಿ ಮಾನಸಿಕವಾಗಿ ಅಸ್ವಸ್ಥರಾಗಿರುವಂತಹ, ಅಂಗವಿಕಲರಾಗಿರುವಂತಹ ಮಕ್ಕಳು ಇಲ್ಲಿ ಉದಾಹರಣೆಗೆ ಸಿಗುತ್ತಾರೆ. ಈ ಪ್ರದೇಶದಲ್ಲಿ ಪ್ರಾಥಮಿಕ ಆರೋಗ್ಯಕೇಂದ್ರಗಳು ಇಲ್ಲ. ತಮ್ಮ ಆರೋಗ್ಯ ಕೈಕೊಟ್ಟಾಗ ಇವರು ನಗರ ಪ್ರದೇಶಗಳಿಗೆ ಹೋಗಿ ಚಿಕಿತ್ಸೆ ಪಡೆದುಕೊಂಡು ಬರುತ್ತಾರೆ. ಈ ಪ್ರದೇಶವು ನಗರಕ್ಕೆ ಸಮೀಪದಲ್ಲಿ ಇರುವುದರಿಂದ ಆರೋಗ್ಯ ಹದಗೆಟ್ಟಾಗ ಚಿಕಿತ್ಸೆಗಾಗಿ ನಗರದ ಆಸ್ಪತ್ರೆಗಳಿಗೆ ಹೋಗಿ ಚಿಕಿತ್ಸೆ ಪಡೆಯುತ್ತಾರೆ.

### ೨. ಇಂದಿರಾ ನಗರ

ಈ ನಗರವನ್ನು ಕರ್ನಾಟಕ ಕೊಳಚೆ ಪ್ರದೇಶದ ನಿರ್ಮೂಲನಾ ಮಂಡಳಿಯು ೧೯೮೭ರಂದು ಕೊಳಚೆ ಪ್ರದೇಶವೆಂದು ಘೋಷಿಸಲಾಯಿತು. ಇದು ಅನೇಕ ಸೌಲಭ್ಯಗಳಿಂದ ವಂಚಿತವಾಗಿರುವಂತಹ ನಗರವಾಗಿದೆ. ಇಲ್ಲಿ ಇಕ್ಕಟ್ಟಾದ ಮನೆಗಳಿದ್ದು, ಒಟ್ಟು ಜನಸಂಖ್ಯೆ ೨೦೩೧ ಇದೆ. ಈ ನಗರದಲ್ಲಿ ವಾಸ ಮಾಡುವ ಜನರಲ್ಲಿ ೧೭೦೦ ಜನರು ಪರಿಶಿಷ್ಟಜಾತಿಗೆ, ೧೫೦ ಜನರು ಪ.ಪಂಗಡ ಮತ್ತು ೧೮೧ ಜನರು ಇತರೆ ವರ್ಗಕ್ಕೆ ಸೇರಿದವರಾಗಿದ್ದಾರೆ.

| ಪ.ಜಾತಿ. | ಪ.ಪಂಗಡ | ಇತರೆ | ಒಟ್ಟು |
|---|---|---|---|
| ೧೭೦೦ | ೧೫೦ | ೧೮೧ | ೨೦೩೧ |

ಖಾಸಗಿ ಒಡೆತನಕ್ಕೆ ಸೇರಿರುವ ಈ ನಗರದಲ್ಲಿ ಅಚ್ಚುಕಟ್ಟಾದ ಮನೆಗಳಾಗಲಿ, ರಸ್ತೆಗಳಾಗಲಿ ಮತ್ತು ಚರಂಡಿ ವ್ಯವಸ್ಥೆಯಾಗಲಿ ಕಾಣುವುದಿಲ್ಲ. ಮನೆಮನೆಗೂ ವಿದ್ಯುತ್ ವ್ಯವಸ್ಥೆಯನ್ನು ಕಲ್ಪಿಸುವ ಉದ್ದೇಶದಿಂದ ಮಂಡಳಿಯು ಹಾಕಿಕೊಂಡಿರುವ ಯೋಜನೆಗಳಡಿಯಲ್ಲಿ ವಿದ್ಯುತ್ ಸಂಪರ್ಕ ಒದಗಿಸಿದ್ದರೂ ಕೆಲವೊಂದು ಮನೆಗಳಿಗೆ ವಿದ್ಯುತ್ ಪೂರೈಕೆಯಾಗಿಲ್ಲ. ಇದು ಕೊಳಚೆ ನಿರ್ಮೂಲನಾ ಮಂಡಳಿಯ ಬೇಜವಾಬ್ದಾರಿ ಕೆಲಸಕ್ಕೆ ಹಿಡಿದಿರುವ ಕನ್ನಡಿಯಾಗಿದೆ. ಅದೇ ರೀತಿಯಾಗಿ ಗೃಹನಿರ್ಮಾಣದ ಯೋಜನೆ ಅಡಿಯಲ್ಲಿ ಮನೆಗಳನ್ನು ಕಟ್ಟಿಕೊಡಲಾಗಿದೆ. ಮನೆಗಳನ್ನು ಕಟ್ಟಿಕೊಟ್ಟಿದ್ದರೂ ಈ ನಗರದಲ್ಲಿ ೩೮೦ ಗುಡಿಸಲುಗಳಿವೆ. ಈ ನಗರಕ್ಕೆ ಸರಿಯಾದ ನೀರಿನ ವ್ಯವಸ್ಥೆ ಮಾಡದೇ ಇರುವುದರಿಂದ, ಒಂದು ದಿನ ನೀರು ಬಿಟ್ಟರೆ ಐದು ದಿನಗಳವರೆಗೂ ಮತ್ತೆ ನೀರು ಕಾಣುವುದಿಲ್ಲ. ಅದರಂತೆ ವ್ಯವಸ್ಥಿತವಾದ ಚರಂಡಿ ಇಲ್ಲದಿರುವುದರಿಂದ ಅನೇಕ ಮನೆಗಳ ಮುಂದೆ ಚರಂಡಿ ನೀರು, ರಸ್ತೆಯ ಮೇಲೆಲ್ಲಾ ಹರಿಯುತ್ತಿರುತ್ತದೆ. ನೈರ್ಮಲ್ಯದ ಕೊರತೆಯಿಂದಾಗಿ ಈ ನಗರದ ಜನರು ಅನೇಕ ಮಾರಕವೆನಿಸಿರುವಂತಹ ರೋಗಗಳಾದ ಮಲೇರಿಯಾ, ಕಾಲರಾ, ಟಾಯಿಫೈಡ್ ಇಂತಹ ರೋಗಗಳಿಂದ ಬಳಲುತ್ತಿರುವುದು ಕಂಡುಬರುತ್ತದೆ. ಆರ್ಥಿಕವಾಗಿ ಪ್ರಬಲರಲ್ಲದ ಕೂಲಿಕೆಲಸವನ್ನೇ ಅವಲಂಬಿಸಿರುವ

ಕಾರ್ಮಿಕ ಕುಟುಂಬಗಳು ವಾಸಿಸುವ ಈ ನಗರದಲ್ಲಿ ಶಿಕ್ಷಣದಿಂದ ವಂಚಿತರಾಗಿರುವ ಜನರು ವಾಸಿಸುತ್ತಿದ್ದಾರೆ. ತಮ್ಮ ಶ್ರಮದಿಂದಲೇ ದುಡಿಮೆಯನ್ನು ಮಾಡಿ, ತುತ್ತಿನ ಚೀಲವನ್ನು ತುಂಬಿಸಿಕೊಳ್ಳಲು ಆಗದಂತಹ ಪರಿಸ್ಥಿತಿಯನ್ನು ಎದುರಿಸುತ್ತಿರುವ ಜನರಿಗೆ ಇಲ್ಲಿ ಕೊರತೆ ಇಲ್ಲ. ಪರಿಶಿಷ್ಟಜಾತಿ, ಪರಿಶಿಷ್ಟ ಪಂಗಡಕ್ಕೆ ಸೇರಿದ ಜನರು ಹೆಚ್ಚಿನ ಸಂಖ್ಯೆಯಲ್ಲಿ ವಾಸಿಸುವುದರಿಂದ ಅವರ ಹಿರಿಯರು ಕೂಡ ಕೃಷಿ, ಕೂಲಿಯ ಕಾರ್ಮಿಕರಾಗಿದ್ದು ಹೊಲ, ಮನೆಯನ್ನೇನು ಮಾಡದೇ ಇರುವುದರಿಂದ ಅವರು ಬಡವರಾಗಿಯೇ ಸತ್ತರು, ಅದೇ ಬಡತನ ಮುಂದೆ ತಮಗೆ ವರ್ಗವಾಯಿತು, ಮುಂದೆ ತಮ್ಮ ಮಕ್ಕಳು ಕೂಡ ಈ ಬಡತನವನ್ನೇ ಅನುಭವಿಸುತ್ತಾರೆ. ಶ್ರೀಮಂತರಾಗುವ ಮಾತು ತಮ್ಮ ಕನಸಿನ ಮಾತೇ ಆಗಿದೆ. ಬಡತನದಲ್ಲಿಯೇ ಹುಟ್ಟಿ, ಬಡತನದಲ್ಲಿಯೇ ಬದುಕಿ ಮುಂದೊಂದಿನ ಬಡತನದಲ್ಲಿಯೇ ಸತ್ತು ಹೋಗುವುದೇ ನಮ್ಮ ಜೀವನವಾಗಿದೆ ಎಂದು ಈ ನಗರದ ಮಹಿಳೆ ಮತ್ತು ಪುರುಷರು ತಮ್ಮ ಬಡತನದ ಬದುಕನ್ನು ತೆರೆದಿಟ್ಟರು.

**ಶೈಕ್ಷಣಿಕ ಮಟ್ಟ**

ಮಾನವನ ಮೂಲಭೂತ ಅವಶ್ಯಕತೆಗಳಲ್ಲಿ ಒಂದಾದ ಶಿಕ್ಷಣವು ಸರ್ವಕಾಲಕ್ಕೂ ಮಹತ್ವವನ್ನು ಪಡೆದಿರುವುದನ್ನು ಕಾಣುತ್ತೇವೆ. ಶಿಕ್ಷಣವಿದ್ದರೆ ಮನುಷ್ಯ ಪ್ರಪಂಚದ ಯಾವ ಮೂಲೆಯಲ್ಲಿಯೂ ಜೀವಿಸಬಲ್ಲ, ಇತರರೊಂದಿಗೆ ಬೆರೆಯಬಲ್ಲ.

ಶಿಕ್ಷಣದ ಬಗ್ಗೆ ಡಾ.ರಾಧಾಕೃಷ್ಣನ್ ಅವರು : "ಮಕ್ಕಳು, ಮಾನವರಾಗಿ, ನಾಗರಿಕರಾಗಿ ಇನ್ನು ಬೇರೆಯವರೊಡನೆ ಮೈತ್ರಿ, ಗೌರವ, ಘನತೆಗಳೊಡನೆ ವರ್ತಿಸುವಂತೆ ಮಾಡಿ ಮಕ್ಕಳಲ್ಲಿ ಔದಾರ್ಯತೆಯಿಂದ ವರ್ತಿಸುವಂತೆ ಮಾಡಿ ಮಕ್ಕಳಲ್ಲಿ ಸಹಾನುಭೂತಿ ಹೆಚ್ಚಾಗುವಂತೆ ಮಾಡುವುದೇ ಶಿಕ್ಷಣ" ಎಂದಿದ್ದಾರೆ.

ಶಿಕ್ಷಣ ಪಡೆಯುವುದರಿಂದ ಮನುಷ್ಯ ನಾಗರಿಕನಾಗುತ್ತಾನೆ. ಬೇರೆಯವರೊಂದಿಗೆ ಬೆರೆಯುವ ಶೈಲಿಯನ್ನು ಕಲಿತುಕೊಳ್ಳುತ್ತಾನೆ. ಮೋಸ ಹೋಗುವುದರಿಂದ ತಪ್ಪಿಸಿಕೊಳ್ಳಬಹುದು. ಶಿಕ್ಷಣದ ಬಗ್ಗೆ ಅನೇಕ ಮಹಾತ್ಮರು, ಮಹಾ ಮೇಧಾವಿಗಳು ಶಿಕ್ಷಣವನ್ನು ಪ್ರತಿಯೊಬ್ಬರು ಹೊಂದಬೇಕೆಂದಿದ್ದಾರೆ. ಆದರೆ ವಿಪರ್ಯಾಸದ ಸಂಗತಿಯೆಂದರೆ, ಈ ಶಿಕ್ಷಣದ ವ್ಯವಸ್ಥೆಯೂ ಕೇವಲ ಮೇಲ್ವರ್ಗದ, ಮೇಲ್‌ಜಾತಿಯ ಸಮುದಾಯದ ಜನರಿಗೆ ಮಾತ್ರ ದೊರೆಯುತ್ತಿದೆ. ಈ ಅನುಕೂಲ ಕೆಳವರ್ಗದ, ಕೆಳಜಾತಿಯ ಸಮುದಾಯದ ಜನರಿಗೆ ದೊರೆಯುವುದು ಕಷ್ಟದ ಮಾತಾಗಿದೆ. ಮೇಲ್ವರ್ಗದ ಜನರು ತಮ್ಮ ಮಕ್ಕಳಿಗೆ ಪ್ರತಿಷ್ಠಿತ ಶಾಲೆಗಳಲ್ಲಿ ದಾಖಲು ಮಾಡಿ ಒಳ್ಳೆಯ ಶಿಕ್ಷಣವನ್ನು ಕೊಡಿಸುತ್ತಾರೆ. ತಮ್ಮ ಬಿಡುವಿನ ವೇಳೆಯಲ್ಲಿ ಅವರಿಗೆ ಪಾಠಗಳನ್ನು ಬೋಧಿಸುತ್ತಾರೆ. ಆದರೆ ಕೆಳವರ್ಗದ ಜನರಿಗೆ ಹೊಟ್ಟೆಯನ್ನು ಹೊರುವುದೇ ದೊಡ್ಡ ಸಮಸ್ಯೆಯಾಗಿರುವುದರಿಂದ ತಮ್ಮ ಮಕ್ಕಳಿಗೆ ಒಳ್ಳೆಯ ಶಾಲೆಯಲ್ಲಿ ಶಿಕ್ಷಣವನ್ನು ಕೊಡಿಸುವುದು ಸಾಧ್ಯವಿಲ್ಲ. ಒಂದು ವೇಳೆ ಸರಕಾರಿ ಶಾಲೆಗಳಲ್ಲಿ ತಮ್ಮ ಮಕ್ಕಳನ್ನು ದಾಖಲು ಮಾಡಿದರೂ ಅವರು ಚೆನ್ನಾಗಿ ಕಲಿಯುವ ಅಂಶಗಳು ಕಂಡು ಬರುವುದಿಲ್ಲ,

ಮುಖ್ಯವಾಗಿ ಹೆಣ್ಣುಮಕ್ಕಳ ಶಿಕ್ಷಣದ ಬಗ್ಗೆ ಹೆಚ್ಚಿನ ಉದಾಸೀನತೆಯನ್ನು ತೋರಿಸಲಾಗುತ್ತದೆ. ಶಿಕ್ಷಣವನ್ನು ಕೊಡಿಸಲು ಹಿಂದೇಟು ಹಾಕುತ್ತಾರೆ. ಇದರ ಹಿಂದಿರುವ ಕಾರಣ ಸ್ಪಷ್ಟವಾಗಿದೆ. ನಮ್ಮ ಪುರುಷ ಪ್ರಧಾನ ವ್ಯವಸ್ಥೆಯೂ ಹೆಣ್ಣಿಗೆ ಯಾವ ಕಾಲಘಟ್ಟದಲ್ಲಿಯೂ ಮಹತ್ವ ನೀಡಿಲ್ಲ. 'ಹೆಣ್ಣು ಹುಟ್ಟಿದ ಮನೆ ಹೆಗ್ಗಣ ಹತ್ತಿದ ಹಾಗೆ' ಎನ್ನುವ ಜನಪದ ಗಾದೆ ಮಾತಿನಿದಾಗಿ ಹೆಣ್ಣು ದೊಡ್ಡವಳಾದ ಮೇಲೆ ಅವಳಿಗೆ ಗಂಡು ಹುಡುಕಿ, ಮದುವೆ ಮಾಡಿ ಮುಂದೆ ಹೆರಿಗೆ, ನಾಮಕರಣ ಹೀಗೆ ಅನೇಕ ಕಾರ್ಯಕ್ರಮಗಳನ್ನು ಮಾಡಬೇಕಾಗುತ್ತದೆ. ಹೀಗಿರುವಾಗ ಅವಳ ಶಿಕ್ಷಣಕ್ಕೆ ಹಣವನ್ನು ವ್ಯಯಮಾಡುವುದಕ್ಕಿಂತ ಅವಳ ಮದುವೆಗೆ ಆ ಹಣವನ್ನು ಖರ್ಚು ಮಾಡಿದರಾಯಿತು ಎನ್ನುವ ಧೋರಣೆ ಈ ತಂದೆ ತಾಯಿಗಳದಾಗಿರುತ್ತದೆ. ಆದರೆ ಇಲ್ಲಿ ಮಗಳ ಅಭಿಪ್ರಾಯ ಮುಖ್ಯವಾಗಿರುವುದಿಲ್ಲ, ಅದು ಶಿಕ್ಷಣದ ವಿಷಯವಾಗಿರಬಹುದು, ಮದುವೆಯ ವಿಷಯವಾಗಿರಬಹುದು. ಪುರುಷ ಪ್ರಧಾನವಾದ ಸಮಾಜದ ಆಳ್ವಿಕೆಯಿಂದಾಗಿ ಮತ್ತು ಅವಳನ್ನು ನಿಯಂತ್ರಿಸುವ ತಂದೆ ಈ ವ್ಯವಸ್ಥೆಯ ನಿಯಂತ್ರಕನಾಗಿರುವುದರಿಂದ ಅವಳ ಅಭಿಪ್ರಾಯಗಳಿಗೆ, ನಿರ್ಣಯಗಳಿಗೆ ಯಾವುದೇ ಬೆಲೆ ಇರುವುದಿಲ್ಲ. ಈ ನಗರದ ವಿವಾಹಿತ ಮತ್ತು ಅವಿವಾಹಿತ ಹೆಣ್ಣುಮಕ್ಕಳು ಅಶಿಕ್ಷಿತರಾಗಿಯೇ ಉಳಿಯಲು ಪ್ರಮುಖವಾದ ಕಾರಣಗಳು ಹೀಗಿವೆ:

ಅ. ಆರ್ಥಿಕವಾಗಿ ಹಿಂದುಳಿದಿರುವುದು ಮತ್ತು

ಆ. ಹೆಣ್ಣು, ಹೆಣ್ಣಿಗೆ ಏಕೆ ಶಿಕ್ಷಣ ಕೊಡಿಸಬೇಕು ಎನ್ನುವ ಮನೋಭಾವನೆ ಬೆಳೆದು ಬಂದಿರುವುದು.

**ಆರೋಗ್ಯದ ಸ್ಥಿತಿ-ಗತಿಗಳು**

ಅನೇಕ ಸಮಸ್ಯೆಗಳ ಕೂಪವಾಗಿರುವ ಕೊಳಚೆ ಪ್ರದೇಶವು, ಮೂಲಭೂತ ಅವಶ್ಯಕತೆಗಳಿಂದ ವಂಚಿತವಾಗಿರುವುದರ ಜೊತೆಗೆ ಆರೋಗ್ಯದ ಸಮಸ್ಯೆಯನ್ನು ಎದುರಿಸುತ್ತಾರೆ. ಆರೋಗ್ಯದ ಸಮಸ್ಯೆಯನ್ನು ಮಕ್ಕಳಿಂದ ಹಿಡಿದು ವಯೋವೃದ್ಧ ಮಹಿಳೆ, ಪುರುಷರವರೆಗೂ ಎದುರಿಸುತ್ತಾರೆ, ಆದರೆ ಇವರೆಲ್ಲರಿಗಿಂತಲೂ ಹೆಚ್ಚಿನ ಸಮಸ್ಯೆಯನ್ನು, ತಿಂಗಳ ಅವಧಿ, ಗರ್ಭಿಣಿ, ಹೆರಿಗೆ, ಗರ್ಭಪಾತದ ಸಂದರ್ಭಗಳು ಎದುರಿಸುವ ಮಹಿಳೆಯದೇ ಹೆಚ್ಚಿನದಾಗಿದೆ. ಈ ನಗರದಲ್ಲಿ ನೈರ್ಮಲ್ಯದ ಕೊರತೆ ಎದ್ದುಕಾಣುತ್ತದೆ. ಇಲ್ಲಿ ವ್ಯವಸ್ಥಿತವಾಗಿರದ ಚರಂಡಿ ವ್ಯವಸ್ಥೆಯಿರದ ಪರಿಣಾಮವಾಗಿ ದಿನನಿತ್ಯದ ಕೆಲಸ ಕಾರ್ಯಗಳಿಗೆ ಉಪಯೋಗಿಸಿಬಿಟ್ಟಂತಹ ನೀರು ಒಂದೆಡೆ ಶೇಖರಗೊಳ್ಳದೇ, ನೀರು ರಸ್ತೆಯ ಮೇಲೆಲ್ಲಾ ಹರಡಿಕೊಂಡಿರುತ್ತದೆ. ಅನೇಕ ವಿಷಕಾರಿಯಾದ, ರೋಗಗಳನ್ನು ತರುವಂತಹ ಸೊಳ್ಳೆ ಮತ್ತು ಕ್ರಿಮಿಗಳ ಆಶ್ರಯತಾಣವಾಗಿರುತ್ತದೆ. ಇಂತಹ ಕಲುಷಿತ ವಾತಾವರಣದಲ್ಲಿ, ಬೆಳಗಿನಿಂದ ರಾತ್ರಿಯವರೆಗೂ ದುಡಿಯುವ ಮಹಿಳೆಯರು ಅನೇಕ ರೋಗಗಳು ತಗುಲಿ, ನರಳಾಡುತ್ತಿರುತ್ತಾರೆ. ಆ ರೋಗಗಳಿಗೆ ಚಿಕಿತ್ಸೆ ಪಡೆಯಲು ಹಣದ ಕೊರತೆ, ಒಂದು ವೇಳೆ ಹಣವಿದ್ದರೂ ತನ್ನ ಆರೋಗ್ಯಕ್ಕೆ ಖರ್ಚು ಮಾಡುವ ಹಣವನ್ನು, ಮನೆಗೆ ದವಸ, ಧಾನ್ಯಗಳನ್ನು ಕೊಂಡುಕೊಳ್ಳಬಹುದಲ್ಲ ಎಂಬ ಯೋಚನೆ ಮಾಡಿ ಆಸ್ಪತ್ರೆಗೆ ಹೋಗದೆ, ಆ ರೋಗಗಳು ಕಾಲ ಕಳೆದಂತೆ ದೊಡ್ಡ

ಪ್ರಮಾಣದಲ್ಲಿ ಬೆಳೆದು ಪ್ರಾಣ ಕಂಟಕವಾಗಿ, ಸಾವನ್ನಪ್ಪುವ ಸಾಧ್ಯತೆ ಇರುವುದು ಮತ್ತು ಇಂತಹ ಕಾಯಿಲೆಗಳಿಂದ ಸಾವನ್ನಪ್ಪಿದ ಉದಾಹರಣೆಗಳು ಈ ನಗರದಲ್ಲಿ ಕಂಡುಬಂದಿವೆ. ಗರ್ಭಿಣಿಯಾದ ಮಹಿಳೆಯು ತನ್ನ ಆರೋಗ್ಯವನ್ನು ಯಾವ ರೀತಿಯಾಗಿ ಕಾಪಾಡಿಕೊಂಡು ಹೋಗಬೇಕು, ಯಾವ ಮುಂಜಾಗ್ರತ ಕ್ರಮಗಳನ್ನು ತೆಗೆದುಕೊಳ್ಳಬೇಕು ಎಂಬುದರ ಬಗ್ಗೆ ಯಾವುದೇ ಮಾಹಿತಿ ಇಲ್ಲದೇ ಇರುವುದು ದೊಡ್ಡ ಆಘಾತಕಾರಿ ವಿಷಯವಾಗಿದೆ. ಆಸ್ಪತ್ರೆಯಲ್ಲಿ ಹೆರಿಗೆಯನ್ನು ಮಾಡಿಸಿಕೊಳ್ಳುವುದರ ಬದಲು ಮನೆಯಲ್ಲಿಯೇ ಸೂಲಗಿತ್ತಿಯರ ಕೈಯಿಂದ ಹೆರಿಗೆಯನ್ನು ಮಾಡಿಸಿಕೊಂಡು ಅನೇಕ ಸಮಸ್ಯೆಗಳಿಗೆ ದಾರಿ ಮಾಡಿಕೊಂಡಿರುತ್ತಾರೆ. ಮಗು ಮತ್ತು ಗರ್ಭಿಣಿಗೆ ಸೂಕ್ತವಾದ ವಾತಾವರಣವಿಲ್ಲದಿರುವುದರಿಂದ, ಆಕೆಯ ಮಾನಸಿಕ ಮತ್ತು ದೈಹಿಕ ಸ್ಥಿತಿಗತಿಗಳನ್ನು ನೋಡಿ ಕೊಳ್ಳುವವರು ಇರದೇ ಇರುವುದರಿಂದಾಗಿ ಇಂತಹ ಸಂದರ್ಭದಲ್ಲಿ ಗರ್ಭಿಣಿ ಮತ್ತು ಮಗುವಿನ ಪ್ರಾಣಕ್ಕೆ ಅಪಾಯವನ್ನುಂಟುಮಾಡುವ ಸಂದರ್ಭಗಳು ಹೆಚ್ಚಿನ ಪ್ರಮಾಣದಲ್ಲಾಗಿರುತ್ತವೆ.

ಗರ್ಭಧರಿಸಿದ ಅವಧಿಯಲ್ಲಿ ಪೌಷ್ಠಿಕವಾದ ಆಹಾರ ಸೇವಿಸದೇ ಇರುವುದು, ಸರಿಯಾದ ಸಮಯಕ್ಕೆ ಚಿಕಿತ್ಸೆಯನ್ನು ಪಡೆಯದೇ, ರಕ್ತಹೀನತೆಯಿಂದ ಬಳಲುವ ಗರ್ಭಿಣಿಯರಿದ್ದಾರೆ. ಸೂಕ್ತವಾದ ಚಿಕಿತ್ಸೆಯ ಕೊರತೆಯಿಂದಾಗಿ ಮಾನಸಿಕವಾಗಿ ಅಸ್ವಸ್ಥರಾಗಿರುವ, ಬುದ್ಧಿಮಾಂದ್ಯ ಮಕ್ಕಳು ಹುಟ್ಟಿರುವ ಉದಾಹರಣೆಗಳು ಕ್ಷೇತ್ರಕಾರ್ಯದಿಂದ ತಿಳಿದುಬಂದಿದೆ.

ಮಹಿಳೆ ಎದುರಿಸುತ್ತಿರುವಷ್ಟು ಸಮಸ್ಯೆಗಳನ್ನು ಯಾರೂ ಎದುರಿಸುತ್ತಿರಲಾರರು. ಆರ್ಥಿಕ ಸಮಸ್ಯೆ, ಬಡತನ, ಆರೋಗ್ಯದ ಸಮಸ್ಯೆ, ನೈರ್ಮಲ್ಯದ ಸಮಸ್ಯೆ ಹೀಗೆ ಅನೇಕ ಸಮಸ್ಯೆಗಳನ್ನು ಮಹಿಳೆಯರು ಎದುರಿಸುತ್ತಿದ್ದಾರೆ. ಇಂತಹ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳುವ ಈ ಪ್ರದೇಶದ ಮಹಿಳೆಯರಿಗೆ ಸೂಕ್ತವಾದ ಮಾಹಿತಿಯನ್ನು ನೀಡುವುದು ಮತ್ತು ಅವರ ಸಮಸ್ಯೆಗಳಿಗೆ ಸರಕಾರದಿಂದ ಯಾವ ಯಾವ ಪರಿಹಾರಗಳು ದೊರೆತಿವೆ ಮತ್ತು ದೊರೆಯಬಹುದು ಎಂಬುದನ್ನು ತಿಳಿದುಕೊಳ್ಳುವುದೇ ಆಗಿದೆ. ಅದರಲ್ಲಿಯೂ ಮಹಿಳೆಯರು ಲಿಂಗಾಧಾರಿತ ಶ್ರಮವಿಭಜನೆ, ಅಸಮಾನವೇತನ ಹಂಚಿಕೆಯಂತಹ ವಿಷಯಗಳು ಕಂಡು ಬರುವುದರಿಂದ ಈ ಅಧ್ಯಯನದಲ್ಲಿ ಅವನ್ನು ಕಂಡುಕೊಳ್ಳುವುದು ಅಧ್ಯಯನದ ಮಹತ್ವವಾಗಿದೆ.

೩. ಜಿಲಾನಾಬಾದ

ಜಿಲಾನಾಬಾದ ಪ್ರದೇಶವನ್ನು ೨೦೦೨ರಂದು ಕೊಳಚೆ ಪ್ರದೇಶವೆಂದು ಘೋಷಣೆ ಮಾಡಲಾಯಿತು. ಈ ಪ್ರದೇಶವು ವಿಶಾಲವಾದ ಪ್ರದೇಶವಾಗಿದ್ದು, ಇಲ್ಲಿ ಮುಸ್ಲಿಮ್ ವರ್ಗದವರು ಹೆಚ್ಚಿನ ಪ್ರಮಾಣದಲ್ಲಿದ್ದಾರೆ. ಕೆಲವೊಂದು ಹಿಂದೂ ಮತ್ತು ಕ್ರಿಶ್ಚಿಯನ್ ಧರ್ಮದವರ ಮನೆ ಇದ್ದರೂ ಇಲ್ಲಿ ಮುಸ್ಲಿಮ್ ಧರ್ಮದವರ ಸಂಖ್ಯೆ ಹೆಚ್ಚಿಗೆ ಇದೇ ಈ ಪ್ರದೇಶಕ್ಕೆ ಅಂಟಿಕೊಂಡಿರುವ ರಾಘವೇಂದ್ರನಗರ ಪೊಲೀಸ್ ಸ್ಟೇಷನ್ ಇದೆ. ಮೊದಲು ಜಿಲಾನಾಬಾದ ಎಂಬ ಹೆಸರಿರುವ ಪ್ರದೇಶವಾಗಿತ್ತು. ಆದರೆ ಈಗ, ಈ ಪ್ರದೇಶದಲ್ಲೆ ಚಿಕ್ಕ ಚಿಕ್ಕ ನಗರಗಳು ಹುಟ್ಟಿಕೊಂಡಿವೆ.

ಉದಾ. ಗಾಲಿಬನಗರ, ಮದೀನಾ ಕಾಲೋನಿ, ಖಾದ್ರಿಚೌಕ, ಮೌಲಾಲಿ ಖಟ್ಟಾ, ರಿಜ್ವಾನಾನಗರ, ನಸಿನಾನಗರ, ಇಕ್ಬಾಲ ಕಾಲೋನಿ ಇನ್ನೂ ಮುಂತಾದ ನಗರಗಳು ಈ ಪ್ರದೇಶದಲ್ಲಿ ಇತ್ತೀಚೆಗೆ ಹುಟ್ಟಿಕೊಂಡಿವೆ. ಶಹಾಜಲಾನಿ ಎಂಬ ಹೆಸರಿನ ಎರಡು ದರ್ಗಾಗಳಿವೆ. ಎರಡು ಸರಕಾರಿ ಶಾಲೆ, ಒಂದು ಹೈಸ್ಕೂಲು ಇದೆ, ಈ ಪ್ರದೇಶದಲ್ಲಿ ಹೆಚ್ಚಾಗಿ ನರ್ಸರಿ ಶಾಲೆಗಳಿವೆ, ಇವುಗಳು ಇತ್ತೀಚಿನ ದಿನಗಳಲ್ಲಿ ಸ್ಥಾಪಿಸಲಾಗಿದೆ, ಸರಕಾರಿ ಆಸ್ಪತ್ರೆಗಳಿಲ್ಲ, ಖಾಸಗಿ ಆಸ್ಪತ್ರೆಗಳು ಹೆಚ್ಚಿನ ಸಂಖ್ಯೆಯಲ್ಲಿವೆ. ಉಳಿದಂತೆ ಅಸ್ತವ್ಯಸ್ತವಾಗಿ ನಿರ್ಮಾಣ ಮಾಡಿರುವಂತಹ ರಸ್ತೆಗಳು, ಓಡಾಡಲು ಅನುಕೂಲಕರವಾಗಿಲ್ಲ. ವ್ಯವಸ್ಥಿತವಾಗಿ ನಿರ್ಮಾಣ ಮಾಡದ ಚರಂಡಿ ವ್ಯವಸ್ಥೆಯಿಂದಾಗಿ, ಅಲ್ಲಲ್ಲಿ ತಗ್ಗುಗಳು, ತಗ್ಗುಗಳಲ್ಲಿ ಬಳಸಿಬಿಟ್ಟಂತಹ, ನೀರು ಮತ್ತು ಮಳೆ ನೀರು ಶೇಖರಣೆಗೊಂಡು ಅನೇಕ ರೋಗಗಳಿಗೆ ದಾರಿಮಾಡಿಕೊಡುತ್ತಿವೆ. ನೈರ್ಮಲ್ಯದ ಕೊರತೆಯಿರುವುದು ಕಂಡು ಬರುತ್ತದೆ. ಈ ಪ್ರದೇಶದವರಿಗಾಗಲೀ ನಗರ ಸಭೆಯವರಿಗಾಗಲಿ ಸ್ವಚ್ಛತೆಯೆಡೆಗೆ ಗಮನವಿರದಿರುವುದು ಮೇಲ್ ನೋಟಕ್ಕೆ ಕಂಡು ಬರುತ್ತದೆ. ಕೊಳಚೆ ನಿರ್ಮೂಲನಾ ಮಂಡಳಿಯ ವತಿಯಿಂದ, ಈ ಪ್ರದೇಶಕ್ಕೆ ಮನೆಗಳನ್ನು ಕಟ್ಟಿಕೊಡಲಾಗಿದೆ, ಸಾಮೂಹಿಕ ಶೌಚಾಲಯದ ವ್ಯವಸ್ಥೆ ಮಾಡಿದ್ದರೂ ಅದರ ಉಪಯೋಗವನ್ನು ಜನರು ಪಡೆಯುತ್ತಿಲ್ಲ, ನೈರ್ಮಲ್ಯದ ಕೊರತೆಯಿರುವುದರಿಂದಾಗಿ ಅನೇಕ ಭಯಾನಕ ರೋಗಗಳಾದ ಚಿಕನ್‌ಗುನ್ಯಾ, ಡೆಂಗ್ಯೂ, ಮಲೇರಿಯಾ, ಕಾಲರಾ, ಟಾಯಿಫೈಡ್‌ದಂತಹ ರೋಗಗಳಿಗೆ ಬಲಿಯಾಗಿರುವುದು ಕಂಡು ಬಂದಿದೆ. ಈ ಪ್ರದೇಶದಲ್ಲಿ ಚಿಕ್ಕ ಮಕ್ಕಳಿಂದ ಹಿಡಿದು ವಯೋವೃದ್ಧರ ವರೆಗೂ ದುಡಿಮೆಯಲ್ಲಿ ತೊಡಗಿರುವವರೇ ಆಗಿದ್ದಾರೆ. ಚಿಕ್ಕ ಚಿಕ್ಕ ಮಕ್ಕಳು ಬೆಳಗ್ಗೆ ಬೇಗ ಎದ್ದು, ಬ್ರೆಡ್, ಬನ್ನು, ಟೀ, ಕಾಫಿ, ಹಾಲು, ತರಕಾರಿ, ಹೂವು ಮಾರಲು ಹೊರಡುತ್ತಾರೆ. ಪುರುಷರು ದಿನಸಿ ಅಂಗಡಿ, ಸೈಕಲ್‌ಷಾಪಿಗೆ, ಬೇಕರಿ ಅಂಗಡಿ, ಚಹಾದ ಅಂಗಡಿ, ಚಿಕ್ಕದಾದ ಹೋಟೆಲನ್ನು, ಮಾಂಸದ ಅಂಗಡಿಯನ್ನು ಹಾಕಿಕೊಂಡಿದ್ದಾರೆ. ಬೆಳಿಗ್ಗೆ ಹೋದರೆ ಮತ್ತೆ ರಾತ್ರಿ ಮನೆಗೆ ಬರುತ್ತಾರೆ. ಇನ್ನೂ ಮಹಿಳೆಯರು, ಮನೆಯ ಕೆಲಸಗಳನ್ನೆಲ್ಲ ಮುಗಿಸಿಕೊಂಡು ಮನೆಯ ಮುಂದೆ ತರಕಾರಿ ಅಂಗಡಿಯನ್ನೋ, ದಿನಸಿ ಅಂಗಡಿಯನ್ನೋ ಹಾಕಿಕೊಂಡಿದ್ದಾರೆ. ಅನೇಕ ಮಹಿಳೆಯರು ಇಟ್ಟಂಗಿ ಭಟ್ಟಿಯಲ್ಲಿ ದುಡಿಯುತ್ತಾರೆ, ಗಾರೆ ಕೆಲಸ, ಕಟ್ಟಡ ನಿರ್ಮಾಣ, ರಸ್ತೆ ನಿರ್ಮಾಣದಂತಹ ದುಡಿಮೆಯಲ್ಲಿ ತೊಡಗಿಕೊಂಡಿರುವವರಿದ್ದಾರೆ, ಮತ್ತು ಮನೆಕೆಲಸವನ್ನು ಮಾಡುವವರು, ಬೀಡಿಕಟ್ಟುವವರು, ಮನೆಯಲ್ಲಿಯೇ ರೊಟ್ಟಿ, ಚಪಾತಿಯನ್ನು ಮಾಡಿ, ಖಾನಾವಳಿಗಳಿಗೆ ಸರಬರಾಜು ಮಾಡುವುದು, ಟೈಲರಿಂಗ್, ಕಸೂತಿ, ಕರಕುಶಲ ಕಲೆಗಳಲ್ಲಿ ತೊಡಗಿಕೊಂಡಿರುವ ಮಹಿಳೆಯರು ಈ ಪ್ರದೇಶದಲ್ಲಿದ್ದಾರೆ.

**ಆರೋಗ್ಯದ ಸ್ಥಿತಿ**

ಒಂದು ಪ್ರದೇಶದಲ್ಲಿರುವ ಜನರು ಆರೋಗ್ಯವಂತರಾಗಿರಲು ಆ ಪ್ರದೇಶದಲ್ಲಿರುವ, ನೈರ್ಮಲ್ಯವು ಬಹಳ ಪ್ರಮುಖ ಅಂಶವಾಗುತ್ತದೆ. ಆದರೆ ಈ ಪ್ರದೇಶದಲ್ಲಿ ನೈರ್ಮಲ್ಯದ ಕೊರತೆಯು ಎದ್ದು ಕಾಣುತ್ತದೆ. ಅಲ್ಲಲ್ಲಿ ತೆರೆದುಕೊಂಡಿರುವ ತಗ್ಗುಗಳಿಂದಾಗಿ, ಆ ತಗ್ಗುಗಳಲ್ಲಿ ಶೇಖರಣೆಗೊಂಡ, ವಿಷಕಾರಿಯಾದ ಕ್ರಿಮಿಕೀಟಗಳು, ಮುಂದೆ ಭಯಾನಕ ರೋಗಗಳು ಹುಟ್ಟಿಕೊಳ್ಳಲು ಮತ್ತು

ಹರಡಿಕೊಳ್ಳಲು ಆಶ್ರಯತಾಣಗಳಾಗಿವೆ. ಈ ಪ್ರದೇಶದಲ್ಲಿ ನೈರ್ಮಲ್ಯವಿಲ್ಲದಿರುವುದಕ್ಕೆ ಅಲ್ಲಿರುವ ಜನರ ಅಜ್ಞಾನವು ಒಂದು ಕಾರಣವಾದರೆ, ಈ ಪ್ರದೇಶದಲ್ಲಿ ಜನರು ಸೇವಿಸುವ ಆಹಾರ ಪದ್ಧತಿಯು ಇನ್ನೊಂದು ಕಾರಣವಾಗಿದೆ. ಹೆಚ್ಚಾಗಿ ಮುಸ್ಲಿಮರೇ ವಾಸಿಸುವ ಈ ಪ್ರದೇಶದಲ್ಲಿ ಕೆಲವೊಬ್ಬರನ್ನು ಹೊರತುಪಡಿಸಿದರೆ ಉಳಿದವರೆಲ್ಲರೂ ಮಾಂಸಹಾರಿಗಳೇ ಆಗಿದ್ದಾರೆ. ಹೀಗಾಗಿ ತಿಂದು ಬಿಸಾಡಿದ ಮಾಂಸದ ತುಣುಕುಗಳು, ಎಲುಬುಗಳು, ತೆರೆದ ಕಸದ ಗುಂಡಿಯಲ್ಲಿ ಹಾಕಿದ, ಮಿಕ್ಕಿದ ಅನ್ನ, ಚರಂಡಿಯ ಪಕ್ಕದಲ್ಲಿ ರಾಜಾರೋಷವಾಗಿ ಓಡಾಡಿಕೊಂಡಿರುವ ಪ್ರಾಣಿಗಳು, ಹಂದಿಗಳು ಇಂತಹ ಕಲುಷಿತ ವಾತಾವರಣದಲ್ಲಿಯೇ ಆಟವಾಡಿಕೊಂಡಿರುವ ಮಕ್ಕಳು, ಇಲ್ಲಿ ಹುಟ್ಟಿಕೊಳ್ಳುವ ಅನೇಕ ರೋಗಗಳಿಗೆ ಮೊದಲು ಬಲಿಯಾಗುವವರು ಈ ಮಕ್ಕಳೇ ಆಗಿದ್ದಾರೆ. ಮಕ್ಕಳು ಕಾಯಿಲೆಗೊಳಗಾದಾಗ ಸೂಕ್ತವಾದ ಸಮಯಕ್ಕೆ ಚಿಕಿತ್ಸೆಯನ್ನು ಕೊಡಿಸುವುದರ ಬದಲು ತಾವು ನಂಬಿರುವಂತಹ ಖಾಜಿಗಳಲ್ಲಿ ಹೋಗಿ, ರೋಗಗಳ ಉಪಶಮನಕ್ಕಾಗಿ ಪ್ರಸಾದ ತೆಗೆದುಕೊಳ್ಳುತ್ತಾರೆ. ಕಾಲಕಳೆದಂತೆ ಆ ಕಾಯಿಲೆಗಳು ಹೆಚ್ಚಾಗಿ, ಪ್ರಾಣ ತೆತ್ತಿರುವ ಉದಾಹರಣೆಗಳು ಕಂಡುಬಂದಿವೆ. ಆರೋಗ್ಯದೆಡೆಗೆ ನಿರ್ಲಕ್ಷ್ಯವನ್ನು ತಾಳಿರುವುದರಿಂದಾಗಿ ಮಹಿಳೆಯರು ಕೂಡ ಅನೇಕ ಆರೋಗ್ಯದ ಸಮಸ್ಯೆಗಳನ್ನು ಎದುರಿಸುತ್ತಿರುತ್ತಾರೆ.

ಈ ಪ್ರದೇಶದಲ್ಲಿರುವ ಮಹಿಳೆಯರು ಕೂಡ ಅನಾರೋಗ್ಯದಿಂದ ಬಳಲುವವರೇ ಆಗಿದ್ದಾರೆ. ಇಲ್ಲಿ ಸಾಮಾನ್ಯವಾಗಿ ಮುಸ್ಲಿಂ ಧರ್ಮದಲ್ಲಿ ಮಹಿಳೆಯರಿಗೆ ಬಹುಬೇಗನೆ ಮದುವೆ ಮಾಡಿಸುತ್ತಾರೆ, ಹೀಗೆ ಮದುವೆ ಮಾಡುವುದರಿಂದ ಬಹುಬೇಗನೆ, ಗರ್ಭವತಿಯಾಗಿ, ವರ್ಷಕ್ಕೊಂದರಂತೆ, ಮಕ್ಕಳನ್ನು ಹೇರುತ್ತಾರೆ. ವರ್ಷಕ್ಕೊಂದರಂತೆ ಮಕ್ಕಳನ್ನು ಹೆರುವುದರಿಂದ, ಮಹಿಳೆಯ ಆರೋಗ್ಯವು ಹದಗೆಟ್ಟು ಹೋಗುತ್ತದೆ. ದೈಹಿಕ ಶಕ್ತಿಯಿಲ್ಲದೇ, ಮೇಲಿಂದ ಮೇಲಾಗುವ ಹೆರಿಗೆಗಳು, ಗರ್ಭಧಾರಣೆ, ಗರ್ಭಪಾತ, ಮಾಸಿಕ ಋತುಸ್ರಾವದಿಂದಾಗಿ, ರಕ್ತಹೀನತೆ ಉಂಟಾಗಿ, ಅನೇಕ ರೋಗಗಳಿಗೆ ತುತ್ತಾಗಿ, ವಯಸ್ಸಿಗೆ ಮುಂಚೆಯೇ ಮುಪ್ಪಾಗುತ್ತಾರೆ. ಬಾಲ್ಯ ವಿವಾಹದಂತಹ ಪದ್ಧತಿಯು ಈ ಪ್ರದೇಶದಲ್ಲಿ ಇಂದಿಗೂ ಕೂಡಾ ಚಾರಿಯಲ್ಲಿರುವುದು ಕಂಡುಬಂದಿದೆ.

ನೈರ್ಮಲ್ಯರಹಿತವಾದ, ಕಲುಷಿತವಾದ ವಾತಾವರಣ, ಬಿಡುವಿಲ್ಲದೆ, ಹಗಲು ರಾತ್ರಿಯೆನ್ನದೇ ದುಡಿಯುವ ಮಹಿಳೆಯರು, ಅನೇಕ ಆರೋಗ್ಯದ ತೊಂದರೆಗಳಿಗೆ ಬಲಿಯಾಗುತ್ತಿದ್ದಾರೆ. ವಿವಾಹಕ್ಕೆ ಯೋಗ್ಯವಲ್ಲದ ವಯಸ್ಸಿನಲ್ಲಿ ಮದುವೆ ಮಾಡಿ ಮುಂದೆ ಮನೆ ತುಂಬ ಮಕ್ಕಳನ್ನು ಹೇರುವುದು, ಕೆಲಸದ ಒತ್ತಡ, ಬಡತನ, ವಿಶ್ರಾಂತಿಯಿಲ್ಲದ ಬದುಕು, ನ್ಯೂನ ಪೋಷಕ, ಮೇಲಿಂದ ಮೇಲೆ ಗರ್ಭಧಾರಣೆ, ಸರಿಯಾದ ಚಿಕಿತ್ಸೆಯ ಇವೆಲ್ಲವುಗಳು ಒಟ್ಟಾಗಿ ಮಹಿಳೆಯರನ್ನು ಅನಾರೋಗ್ಯಕ್ಕೆ ಗುರಿಪಡಿಸುತ್ತಿವೆ.

**ಶೈಕ್ಷಣಿಕ ಮಟ್ಟ**

ಈ ಪ್ರದೇಶದಲ್ಲಿ ಉಳಿದ ಕೊಳಚೆ ಪ್ರದೇಶಗಳಿಗೆ ಹೋಲಿಸಿದರೆ ಶೈಕ್ಷಣಿಕ ಮಟ್ಟ ಕಡಿಮೆ ಪ್ರಮಾಣದಲ್ಲಿದೆ. ಈ ಪ್ರದೇಶದಲ್ಲಿ ಎಂಟು ವರ್ಷದ ಬಾಲಕ ಬಾಲಕಿಯಿಂದ ಹಿಡಿದು ಎಂಬತ್ತು ವರ್ಷದ ವೃದ್ಧರವರೆಗೂ ದುಡಿಮೆಯಲ್ಲಿ ತೊಡಗಿಕೊಂಡಿರುವವರೇ ಇದ್ದಾರೆ. ಇಲ್ಲಿ ದುಡಿಯುವವರ

ಸಂಖ್ಯೆ ಹೆಚ್ಚಿದೆ. ಈ ಜನರು ಹೆಚ್ಚಾಗಿ ವ್ಯಾಪಾರದಲ್ಲಿ ತೊಡಗಿಕೊಂಡಿರುವವರಾಗಿದ್ದಾರೆ. ದಿನಸಿ ಅಂಗಡಿ, ಹೋಟೆಲು, ಚಹಾದಂಗಡಿ, ಹೂವಿನ ವ್ಯಾಪಾರ, ಟೈಲರಿಂಗ್, ಮಾಂಸ ಮಾರುವುದು ಇತ್ಯಾದಿ. ಹೀಗೆ ಹತ್ತು ಹಲವು ಕೆಲಸಗಳಲ್ಲಿ ತೊಡಗಿಕೊಂಡಿರುವುದರಿಂದ ದುಡಿಮೆಗೆ ನೀಡಿದಷ್ಟು ಮಹತ್ವ ಶಿಕ್ಷಣಕ್ಕೆ ನೀಡಿಲ್ಲ. ಬಾಲಕಾರ್ಮಿಕರ ಸಂಖ್ಯೆ, ಶಾಲೆ ಬಿಟ್ಟ ಮಕ್ಕಳ ಸಂಖ್ಯೆ ಈ ಪ್ರದೇಶದಲ್ಲಿ ಹೆಚ್ಚಿನ ಪ್ರಮಾಣದಲ್ಲಿದೆ. ಮಕ್ಕಳೆಲ್ಲರನ್ನು ದುಡಿಮೆಗಾಗಿ ಬಳಸಿಕೊಳ್ಳುತ್ತಾರೆ. ಶಾಲೆಗೆ ಕಳಿಸಿದರೆ ದುಡಿಯುವವರಾರು ಎನ್ನುವ ಪ್ರಶ್ನೆ ಪಾಲಕರದಾಗಿದೆ, ತಮ್ಮೊಂದಿಗೆ ತಮ್ಮ ಮಕ್ಕಳನ್ನು ಸಹ ದುಡಿಮೆಯಲ್ಲಿ ತೊಡಗಿಸಿಕೊಂಡಿರುವ ಪಾಲಕರು ಮಕ್ಕಳಿಗೆ ಶಿಕ್ಷಣದಿಂದ ವಂಚಿತರನ್ನಾಗಿ ಮಾಡುತ್ತಿದ್ದಾರೆ. ಮುಂದೆ ಕಲಿಯುವ ಹಂಬಲ ಇದ್ದರೂ ಕೂಡ ತಂದೆ ತಾಯಿಗಳ ವಿರುದ್ಧ ಹೋಗದೆ, ಅನಿವಾರ್ಯವಾಗಿ ದುಡಿಯಲು ಹೋಗುತ್ತಾರೆ. ಗೆಳೆಯರೊಂದಿಗೆ ಶಾಲೆಗೆ ಹೋಗಬೇಕಾದ ಮಕ್ಕಳು ದುಡಿಮೆಯ ನೊಗಹೊತ್ತು, ಮನೆಯಲ್ಲಿರುವ ಸದಸ್ಯರ ಬೇಕು ಬೇಡಗಳನ್ನು ಪೂರೈಸುವುದು ಈ ಪುಟ್ಟ ಮಕ್ಕಳ ಜವಾಬ್ದಾರಿಯಾಗಿದೆ.

ಈ ಪ್ರದೇಶದಲ್ಲಿ ಒಂದು ಅಂಗನವಾಡಿ ಕೇಂದ್ರವಿದೆ. ಎರಡು ಪ್ರಾಥಮಿಕ ಶಾಲೆಗಳಿವೆ. ಒಂದು ಪ್ರೌಢ ಶಾಲೆಯಿದೆ. ಈ ನಗರದಲ್ಲಿ ಶಿಕ್ಷಣವನ್ನು ಪಡೆಯುವ ಅನುಕೂಲತೆಗಳಿದ್ದರೂ ತಂದೆ ತಾಯಿಗಳು ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸುವುದಿಲ್ಲ. ಬದಲಿಗೆ ದುಡಿಯಲು ಕಳಿಸುತ್ತಾರೆ. ಅನಕ್ಷರಸ್ಥ ತಂದೆ ತಾಯಿಗಳು ತಮ್ಮ ಮಕ್ಕಳನ್ನು ಸಹ ಅನಕ್ಷರಸ್ಥರನ್ನಾಗಿ ಮಾಡುತ್ತಾರೆ. ಮಕ್ಕಳು ಶಿಕ್ಷಣದಿಂದ ವಂಚಿತರಾಗಿರಲು, ಕಿತ್ತು ತಿನ್ನುವ ಬಡತನ ಒಂದು ಕಾರಣವಾದರೆ, ಮನೆ ತುಂಬ ಇರುವ ಮಕ್ಕಳಿಗೆಲ್ಲ ಶಿಕ್ಷಣ ಕೊಡಿಸುವುದು ಕಷ್ಟದ ಮಾತಾಗಿದೆ ಎಂಬ ನಕಾರಾತ್ಮಕ ಧೋರಣೆಯು ಇನ್ನೊಂದು ಕಾರಣವಾಗಿದೆ.

ಈ ಪ್ರದೇಶದ ಮಹಿಳಾ ಶಿಕ್ಷಣವು ಕೂಡ ಕಡಿಮೆ ಪ್ರಮಾಣದಲ್ಲಿಯೇ ಇದೆ. ಹೆಣ್ಣುಮಕ್ಕಳ ಶಿಕ್ಷಣಕ್ಕೆ ಹೆಚ್ಚಿನ ಮಹತ್ವ ಕೊಡದೇ ಇರುವುದು, ತಂದೆ ತಾಯಿಯರ ಅಜ್ಞಾನಕ್ಕೆ ಹಿಡಿದ ಕನ್ನಡಿಯಾಗಿದೆ. ತಂದೆ ತಾಯಿಯರ ಅರಿವಿನ ಕೊರತೆಯನ್ನು ಹೆಣ್ಣುಮಕ್ಕಳು ಅನುಭವಿಸಬೇಕಾಗಿದೆ. ಹೆಣ್ಣು ಶಾಲೆ ಕಲಿತು ನಮ್ಮನ್ನು ಸಾಕಬೇಕಾಗಿಲ್ಲ ಎನ್ನುವ ಮನೋಭಾವ, ಅನೇಕ ಮೂಢನಂಬಿಕೆಗಳು, ಆಚರಣೆಗಳು ಸಂಪ್ರದಾಯಗಳ ಹೆಸರಿನಲ್ಲಿ ಹೆಣ್ಣುಮಕ್ಕಳನ್ನು ಶಾಲೆಗೆ ಕಳಿಸದೇ ಬೇಗನೇ ಮದುವೆ ಮಾಡಿ ತಮ್ಮ ಕರ್ತವ್ಯದಿಂದ ಮುಕ್ತಿ ಪಡೆಯಬೇಕು ಎನ್ನುವ ಮನೋಭಾವನೆ ಈ ಜನರದ್ದಾಗಿದೆ. ಹೀಗಾಗಿ ಹೆಣ್ಣುಮಕ್ಕಳು ಚಿಕ್ಕ ವಯಸ್ಸಿನಲ್ಲಿಯೇ ವಿವಾಹ ಮಾಡಿಕೊಂಡು, ಗಂಡನ ಮನೆಗೆ ಗೃಹಿಣಿಯಾಗಿ ಹೋಗುತ್ತಾರೆ.

ಈ ಪ್ರದೇಶದಲ್ಲಿ ಸಂದರ್ಶಿಸಿದ ಎಲ್ಲ ಮಹಿಳೆಯರು ಅನಕ್ಷರಸ್ಥರಾಗಿದ್ದಾರೆ. ನಿಮಗೆ ಶಿಕ್ಷಣದ ಅವಶ್ಯಕತೆ ಇರಲಿಲ್ಲವೇ ಎಂದು ಪ್ರಶ್ನಿಸಿದಾಗ "ನನಗೆ ಚಿಕ್ಕವಯಸ್ಸಿನಲ್ಲಿಯೇ ಮದುವೆ ಮಾಡಿಕೊಡಲಾಯಿತು. ಪ್ರಾಥಮಿಕ ಶಾಲೆಯ ಮೆಟ್ಟಿಲು ಹತ್ತಿದಾಗ, ನಮಗೂ ಸಂತೋಷವಾಯ್ತು. ಗೆಳತಿಯರೊಂದಿಗೆ ದಿನಾಲು ಶಾಲೆಗೆ ಹೋಗೊದು, ಕಥೆ ಕೇಳುವುದು, ಶಿಕ್ಷಕರಿಂದ ಪಾಠ ಭೋದನೆ,

ಆಟವಾಡುವುದು, ಊಟ ಮಾಡುವುದು ಎಲ್ಲವೂ ಚೆನ್ನಾಗನ್ನಿಸುತ್ತಿತ್ತು. ಆದರೆ ನಮ್ಮನೆಯಲ್ಲಿ ನನ್ನ ತಂದೆ ತಾಯಿ, ಶಾಲೆಗೆ ಹೋಗುವುದನ್ನು ಬಿಡಿಸಿ ಬಿಟ್ಟರು. ಮನೆಯಲ್ಲಿ ತಮ್ಮ ತಂಗಿಯರನ್ನು ನೋಡಿಕೊಳ್ಳುವುದಕ್ಕೋಸ್ಕರ, ಅಮ್ಮನಿಗೆ ಅಡಿಗೆ ಕೆಲಸಕ್ಕೆ ಸಹಾಯ ಮಾಡುವುದಕ್ಕಾಗಿ, ನನ್ನನ್ನು ಶಾಲೆಯಿಂದ ಬಿಡಿಸಲಾಯಿತು, ನಾನು ಋತುಮತಿಯಾದ ಎರಡು ತಿಂಗಳಲ್ಲೇ ಮದುವೆ ಮಾಡಿಕೊಡಲಾಯಿತು. ಹೀಗಾಗಿ ನಾನು ಕಲಿಯುವ ಹಂಬಲವಿದ್ದರೂ ತಂದೆ ತಾಯಿಗಳ ಒತ್ತಾಯಕ್ಕೆ ಮಣಿದು ಶಾಲೆ ಬಿಡಬೇಕಾಯಿತು" ಎಂದು ಸುದರಾಬೀ ಉತ್ತರಿಸಿದರು.

ಈ ಪ್ರದೇಶದ ಮಹಿಳೆಯರ ಶಿಕ್ಷಣಕ್ಕೆ ಹೆಚ್ಚಿನ ಪ್ರೋತ್ಸಾಹವಿಲ್ಲದಿರಲು ಮುಖ್ಯವಾದ ಕೆಲವೊಂದು ಕಾರಣಗಳನ್ನು, ಹೀಗೆ ಗುರುತಿಸಬಹುದಾಗಿದೆ.

೧. ಪೋಷಕರ ಅಜ್ಞಾನ

೨. ಬಡತನ

೩. ವಿವಾಹ

೪. ಹೆಣ್ಣುಮಕ್ಕಳನ್ನು ಶಾಲೆಗೆ ಕಳುಹಿಸುವುದೆಂದರೆ ಮನೆಯಲ್ಲಿ ದುಡಿಯುವ ಕೈಗಳನ್ನು ಕಳೆದುಕೊಳ್ಳುತ್ತೇವೆಂಬ ಧೋರಣೆ

೫. ಪುರುಷ ಪ್ರಧಾನ ವ್ಯವಸ್ಥೆ

೬. ಆರೋಗ್ಯ

ಇವೆಲ್ಲ ಕಾರಣಗಳು ಕೊಳಚೆ ಪ್ರದೇಶದಲ್ಲಿರುವ ಹೆಣ್ಣುಮಕ್ಕಳು ಶಿಕ್ಷಣದಿಂದ ವಂಚಿತರಾಗಿರುವುದಕ್ಕೆ ಕಾರಣವಾಗಿವೆ.

**೪. ಹೀರಾಪೂರ**

ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿಯು ಈ ಪ್ರದೇಶವನ್ನು ೨೦೦೨ರಲ್ಲಿ ಕೊಳಚೆ ಪ್ರದೇಶವೆಂದು ಘೋಷಣೆ ಮಾಡಲಾಯಿತು. ಈ ನಗರದಲ್ಲಿ ವಾಸಿಸುವವರೆಲ್ಲರೂ ಪರಿಶಿಷ್ಟ ಜಾತಿಗೆ ಸೇರಿದವರಾಗಿದ್ದಾರೆ. ಪರಿಶಿಷ್ಟ ಜಾತಿಯವರ ಸಂಖ್ಯೆ ೧೯೨ರಷ್ಟಿದೆ. ಈ ಪ್ರದೇಶದಲ್ಲಿ ಓಡಾಡಲು ಸರಿಯಾದ ರಸ್ತೆಯಿಲ್ಲ, ಹಳೆಯ ಕಾಲದಲ್ಲಿ ಕಟ್ಟಿಸಿರುವಂತಹ ಮನೆಯೇ ಇವರಿಗೆ ಆಶ್ರಯವಾಗಿದೆ, ವಿದ್ಯುತ್ ದೀಪ, ಬೀದಿ ದೀಪಗಳ ವ್ಯವಸ್ಥೆಯನ್ನು ಮಾಡಿಕೊಡಲಾಗಿದೆ, ಚರಂಡಿ ವ್ಯವಸ್ಥೆಯನ್ನು ಸರಿಯಾಗಿ ಮಾಡಲಾಗಿದೆ, ಮನೆಯ ಸ್ವಚ್ಛತೆಯೊಂದಿಗೆ ಹೊರಗಿನ ಸ್ವಚ್ಛತೆಗೆ ಈ ಜನರು ಗಮನಕೊಡುವುದರಿಂದ ಕೊಳಕು, ಚರಂಡಿಯಿಂದ ನೀರು ಹರಿಯುವ ದೃಶ್ಯ ಕಡಿಮೆಯಿದೆ. ಮನೆಯಲ್ಲಿ ಕಿತ್ತು ತಿನ್ನುವ ಬಡತನ, ಹತ್ತರಿಂದ, ಹನ್ನೆರಡು ಸಂಖ್ಯೆಯವರೆಗೂ ಎಲ್ಲ ಸದಸ್ಯರು ಒಂದೇ ಸೂರಿನಡಿಯಲ್ಲಿ ವಾಸ ಮಾಡುತ್ತಾರೆ. ಮನೆಯ ಇಷ್ಟು ಸದಸ್ಯರ ಹೊಟ್ಟೆ, ಬಟ್ಟೆಯನ್ನು ನೋಡಿಕೊಳ್ಳುವುದು ಈ ಮಹಿಳೆಯರ ಜವಾಬ್ದಾರಿಯೇ ಆಗಿದೆ. ಜವಾಬ್ದಾರಿಯಿಂದ ನುಣುಚಿಕೊಂಡಿರುವ,

ಕುಡಿದು ಬರುವ ಗಂಡನಿಂದ ತನ್ನ ಕಷ್ಟ ನೀಗುತ್ತದೆ ಎನ್ನುವ ನಿರೀಕ್ಷೆಯಿಲ್ಲದೇ ತನ್ನ ಈ ಜವಾಬ್ದಾರಿಯನ್ನು ಬಿಸಿಲು, ಚಳಿ ಎನ್ನದೇ ನಿಭಾಯಿಸಿಕೊಂಡು ಹೋಗುವ ಮಹಿಳೆಯರು ಇಲ್ಲಿ ಕಾಣಸಿಗುತ್ತಾರೆ. ದುಡಿಮೆಯನ್ನು ಅವಲಂಬಿಸಿರುವವರ ಸಂಖ್ಯೆ ಹೆಚ್ಚಿದೆ. ಅದರಲ್ಲಿ ಮಹಿಳಾ ದುಡಿಮೆಗಾರರ ಪ್ರಮಾಣ ಹೆಚ್ಚಿದೆ. ಗಾರೆ ಕೆಲಸ, ಗೋದಾಮುಗಳಲ್ಲಿ ದುಡಿಯುವುದು, ತರಕಾರಿ ಮಾರಾಟ ಮಾಡುವುದು, ಮನೆಯಲ್ಲಿಯೇ ಒಂದು ಕಡೆ ಸ್ಥಳವನ್ನು ಮಾಡಿಕೊಂಡು ದಿನಸಿ ಅಂಗಡಿಯನ್ನೊ, ಒಂದು ಚಹಾದ ಅಂಗಡಿಯನ್ನೋ ಹಾಕಿಕೊಂಡಿರುವ ಮಹಿಳೆಯರು ಇಲ್ಲಿದ್ದಾರೆ. ಕೆಲವು ಮಹಿಳೆಯರು ಮನೆಕೆಲಸವನ್ನು ಮಾಡಿಕೊಂಡು, ಪುರಸಭೆ, ನಗರಸಭೆಯಲ್ಲಿ, ರೈಲ್ವೆ ನಿಲ್ದಾಣ, ಬಸ್ಸುನಿಲ್ದಾಣದಲ್ಲಿ ಕಸ ಗುಡಿಸುವ, ನೆಲ ಒರೆಸುವ ಕೆಲಸವನ್ನು ಮಾಡಿಕೊಂಡಿರುವವರು ಈ ಪ್ರದೇಶದಲ್ಲಿದ್ದಾರೆ.

ಕ್ಷೇತ್ರ ಕಾರ್ಯ ಕೈಗೊಂಡಾಗ, ಈ ಪ್ರದೇಶದಲ್ಲಿರುವ ಮಹಿಳಾ ದುಡಿಮೆಗಾರರ ಬದುಕು ಅಭದ್ರತೆಯಿಂದ, ಅತಂತ್ರದಿಂದ ಕೂಡಿದ್ದು ಕಂಡು ಬಂದಿತು. ಸಂದರ್ಶನಕ್ಕಾಗಿ ಆಯ್ಕೆ ಮಾಡಿಕೊಂಡಂತಹ ಮಹಿಳೆಯರು ಗೋದಾಮುಗಳಲ್ಲಿ ಮತ್ತು ಗಾರೆ ಕೆಲಸದಲ್ಲಿ ದುಡಿಯುವವರಾಗಿದ್ದರಿಂದ, ಅವರೂ ತಮ್ಮ ಉದ್ಯೋಗದಲ್ಲಿರುವ ಅಭದ್ರತೆಯನ್ನು ತೋಡಿಕೊಂಡರು, ಒಂದು ತಿಂಗಳ ಅವಧಿಯಲ್ಲಿ ಕೇವಲ ೧೫ ದಿನಗಳವರೆಗೆ ಮಾತ್ರ ದುಡಿಯುತ್ತಿದ್ದು ಉಳಿದ ದಿನಗಳು ಯಾವುದೇ ಕೆಲಸವಿಲ್ಲದೇ ಖಾಲಿ ಕುಳಿತುಕೊಂಡಿರುವುದು ಗಮನಕ್ಕೆ ಬಂದಿತು. ಒಂದು ದಿನಕ್ಕೆ ೬೦ ರೂಪಾಯಿಯಂತೆ ಕೂಲಿ ಮಾಡುವ ಇವರ ತಿಂಗಳ ವರಮಾನ ೧೦೦೦ಕ್ಕಿಂತಲೂ ಕೆಳಗೆ ಇದೆ.

**ಶೈಕ್ಷಣಿಕ ಮಟ್ಟ**

ಪರಿಶಿಷ್ಟ ಜಾತಿಯ ಜನರೇ ಹೆಚ್ಚಿನ ಸಂಖ್ಯೆಯಲ್ಲಿ ವಾಸಿಸುವ ಈ ಪ್ರದೇಶದಲ್ಲಿ ಅಕ್ಷರಸ್ಥ ಮಹಿಳೆಯರ ಸಂಖ್ಯೆ ಕಡಿಮೆ ಇದೆ. ಶಿಕ್ಷಣದ ಮಹತ್ವ ಗೊತ್ತಿರದ, ಕೇವಲ ದುಡಿಮೆಯೊಂದೇ ತಮ್ಮ ಬಾಳಿನ ಗುರಿಯನ್ನಾಗಿ ಮಾಡಿದಂತಹ ತಂದೆ, ತಾಯಿಗಳು ಮಕ್ಕಳನ್ನು ಶಿಕ್ಷಣದಿಂದ ವಂಚಿತರನ್ನಾಗಿ ಮಾಡಿದ್ದಾರೆ. ಶಿಕ್ಷಣ ಕಲಿತರೆ ತಮಗೆ ನಾಲ್ಕು ಅಕ್ಷರ ಕಲಿತ ಹಾಗಾಗುತ್ತೇ, ಇತರರ ಜೊತೆಗೆ ಸಂಪರ್ಕ ಏರ್ಪಡಿಸಬಹುದು, ಮೋಸ ಹೋಗುವುದನ್ನು ತಪ್ಪಿಸಬಹುದೆಂಬ ಅರಿವು ಇವರಲಿಲ್ಲ, ಬದಲಿಗೆ ಅಕ್ಷರ ಕಲಿತರೆ ನಮ್ಮ ಹೊಟ್ಟೆ ತುಂಬುವುದಿಲ್ಲ, ನಾವು ದುಡಿದು ನಮ್ಮ ಹೊಟ್ಟೆಯ ಹಸಿವನ್ನು ನೀಗಿಸಿಕೊಳ್ಳಬೇಕು, ಅಕ್ಷರ ಕಲಿಯುವುದಕ್ಕೆ ದುಡ್ಡು ನಮ್ಮಂತಹ ಬಡವರ ಬಳಿ ಇಲ್ಲವೆಂಬುದು ಈ ಪ್ರದೇಶದ ಪೋಷಕರ ಉತ್ತರವಾಗಿದೆ. ಈ ಪ್ರದೇಶದಲ್ಲಿರುವ ಪುರುಷರಲ್ಲಿ ಶೇ. ೫೦ರಷ್ಟು ಪ್ರಮಾಣದಲ್ಲಿ ಅಕ್ಷರವನ್ನು ಕಲಿತ ಪುರುಷರು ಇದ್ದರೆ ಶೇ. ೫೦ರಷ್ಟು ಪುರುಷರು ಅನಕ್ಷರಸ್ಥರಾಗಿದ್ದಾರೆ, ಇವರೆಲ್ಲ ಮೈಮುರಿದು ದುಡಿಯುವವರಾಗಿರುವುದರಿಂದ ಅಕ್ಷರ ಜ್ಞಾನದ ಅವಶ್ಯಕತೆ ಇವರಿಗೆ ಇಲ್ಲವೆನ್ನುತ್ತಾರೆ. ಅಕ್ಷರಸ್ಥರಾಗಿದ್ದುಕೊಂಡು ಉದ್ಯೋಗವಿಲ್ಲದ ಅನೇಕ ಯುವಕರು ಈ ಪ್ರದೇಶದಲ್ಲಿ ಸಿಗುತ್ತಾರೆ.

ಅನಕ್ಷರಸ್ಥರಾಗಿ ಉಳಿಯಲು ಬಡತನ ಮತ್ತು ತಂದೆ ತಾಯಿಗಳ ಅಜ್ಞಾನ ಕಾರಣವಾಗಿದೆ. ಮೊದಲಿಗೆ ಬಡತನ ಅವರನ್ನು ಶಿಕ್ಷಣದಿಂದ ದೂರವಿಡುತ್ತದೆ. ಹೊಟ್ಟೆ ತುಂಬಿಸಿಕೊಳ್ಳುವುದೇ ದಿನನಿತ್ಯದ ಸಮಸ್ಯೆಯಾಗುವಾಗ ತಂದೆ ತಾಯಿ ಮಕ್ಕಳ ಓದಿನ ಬಗ್ಗೆ ಯೋಚಿಸುವುದು ಕಷ್ಟ, ಅಲ್ಪ, ಸ್ವಲ್ಪ, ಅನುಕೂಲವಿದ್ದರೆ ಸ್ವಾಭಾವಿಕವಾಗಿ ಹೆಣ್ಣು ಮಗುವಿನ ಓದಿಗಿಂತಲೂ ಗಂಡು ಮಗುವಿನ ಓದು ಹೆಚ್ಚಿನ ಪ್ರಾಮುಖ್ಯತೆ ಪಡೆಯುತ್ತದೆ. ಹೇಗಿದ್ದರೂ ಹೆಣ್ಣು ಮದುವೆಯಾಗಿ ಇನ್ನೊಬ್ಬರ ಮನೆ ಸೇರುವವಳಾದ್ದರಿಂದ ಅವಳಿಗೆ ಮಾಡುವುದೆಲ್ಲ ದಂಡ ಎಂಬ ಭಾವನೆ ಬಲವಾಗಿದೆ. ಇಂಥ ಭಾವನೆ ಇಟ್ಟುಕೊಂಡಿರುವಾಗ ಹೆಣ್ಣು ಮಗುವು ಶಿಕ್ಷಣದಿಂದ ವಂಚಿತವಾಗಿಯೇ ಬೆಳೆಯುತ್ತದೆ. ಅಕ್ಷರ ಜ್ಞಾನವಿಲ್ಲದೆ, ತಮಗೆ ಅರಿವಿಲ್ಲದೆ ಇತರರ ವಂಚನೆಗೆ ಒಳಗಾಗುವವರ ಉದಾಹರಣೆ ಈ ಪ್ರದೇಶದಲ್ಲಿ ಕಾಣಸಿಗುತ್ತದೆ.

ಅಕ್ಷರ ಜ್ಞಾನವಿಲ್ಲದ, ನೈತಿಕತೆಯ ಕೊರತೆಯಿರುವ ಪುರುಷರು ಕುಡಿತದ ಚಟದಿಂದಾಗಿ ತಮ್ಮ ಹೆಂಡತಿಯರ ಮೇಲೆ ಹಲ್ಲೆ ಮಾಡುವುದು, ವರದಕ್ಷಿಣೆಯ ಹಿಂಸೆಯನ್ನು ಮಾಡುವುದು, ಕುಡಿತಕ್ಕೆ ದುಡ್ಡು ಕೊಡದೇ ಹೋದರೆ ಅವಾಚ್ಯ ಶಬ್ದಗಳಿಂದ ನಿಂದಿಸುವ ಪುರುಷರಿಗೆ ಇಲ್ಲಿ ಕೊರತೆ ಇಲ್ಲ. ಇದಕ್ಕೆ ಮುಖ್ಯ ಕಾರಣ ಶಿಕ್ಷಣದ ಕೊರತೆಯು ಮತ್ತು ಅನಕ್ಷರಸ್ಥರು ಆಗಿರುವುದೇ ಆಗಿದೆ.

**೫. ಡಾ.ಬಿ.ಆರ್.ಅಂಬೇಡ್ಕರ್ ಆಶ್ರಯ ಕಾಲೋನಿ**

ಈ ನಗರವು ಕೊಳಚೆ ಪ್ರದೇಶ ನಿರ್ಮೂಲನಾ ಮಂಡಳಿಯವರು ಕೊಳಚೆ ಪ್ರದೇಶವೆಂದು ಘೋಷಣೆ ಮಾಡಿರುವ ಪ್ರದೇಶವಾಗಿದೆ. ಕನಿಷ್ಠ ಸೌಲಭ್ಯಗಳಿಂದ ವಂಚಿತವಾಗಿರುವ ಈ ನಗರವನ್ನು ಅಕ್ಟೋಬರ್ ೨೦೦೨ರಂದು ಕೊಳಚೆ ಪ್ರದೇಶವೆಂದು ಘೋಷಿಸಲಾಗಿದೆ. ಒಟ್ಟು ಜನಸಂಖ್ಯೆ ೨೪೭೫ ಇದೆ. ಈ ನಗರದಲ್ಲಿ ಪರಿಶಿಷ್ಟ ಜಾತಿಯ ಜನ ೭೦೦, ಪರಿಶಿಷ್ಟ ಪಂಗಡದವರು ೫೫೦, ಮತ್ತು ಇತರೆ ವರ್ಗದವರು ೧೨೨೫ ಇದ್ದಾರೆ.

| ಕ್ರ.ಸ. | ಪ.ಜಾತಿ | ಪ.ಪಂ. | ಇತರೆ | ಒಟ್ಟು |
|---|---|---|---|---|
| ೧ | ೭೦೦ | ೫೫೦ | ೧೨೨೫ | ೨೪೭೫ |

ಈ ನಗರದಲ್ಲಿ ಅವಶ್ಯಕವಾಗಿ ಬೇಕಾಗಿರುವಂತಹ ಸೌಲಭ್ಯಗಳಾದ, ಚರಂಡಿ ವ್ಯವಸ್ಥೆಯಾಗಲಿ, ವಿದ್ಯುತ್‌ದೀಪದ ವ್ಯವಸ್ಥೆಯಾಗಲಿ, ಅಚ್ಚುಕಟ್ಟಾದ ರಸ್ತೆಯಾಗಲಿ ಇಲ್ಲ. ಕೆಲವೊಂದು ಜನರಿಗೆ ಮಾತ್ರ ಆಶ್ರಯ ಯೋಜನೆಯಡಿ ಮನೆಗಳನ್ನು ಕಟ್ಟಿಕೊಡಲಾಗಿದೆ. ಉಳಿದಂತಹ ಜನರು ಗುಡಿಸಲುಗಳಲ್ಲೇ ವಾಸ ಮಾಡುತ್ತಾರೆ. ಈ ಪ್ರದೇಶದಲ್ಲಿ ಒಟ್ಟು ೪೫೦ ಗುಡಿಸಲುಗಳಿರುವುದು ಕಂಡುಬರುತ್ತದೆ. ಸರಿಯಾದ ನೀರಿನ ವ್ಯವಸ್ಥೆಯನ್ನು ಮಾಡದೇ ಇದ್ದುದರಿಂದ ನೀರಿಗಾಗಿ ಪರದಾಡುವಂತಹ ಪರಿಸ್ಥಿತಿ ಇವರಿಗೆ, ಸರಿಯಾದ ನಲ್ಲಿ ವ್ಯವಸ್ಥೆಯು ಇಲ್ಲದಿರುವುದು, ಸರಿಯಾಗಿ

ನಿರ್ಮಿಸದ ಚರಂಡಿ ವ್ಯವಸ್ಥೆಯಿಂದಾಗಿ ವಾತಾವರಣ ಕಲುಷಿತಗೊಂಡು, ಅನೇಕ ರೋಗಗಳಿಗೆ ಆಹ್ವಾನ ನೀಡುವಂತಾಗಿವೆ. ಬೆಳಿಗ್ಗೆಯಿಂದ ಸಾಯಂಕಾಲದವರೆಗೂ ದುಡಿಯುವ ಜನರಿಗೆ, ಸರಿಯಾದ ಆಹಾರವು ಸಿಗದೇ ಕಷ್ಟದ ಜೀವನ ನಡೆಸುವಂತಾಗಿದೆ. ಈ ಪ್ರದೇಶದ ಜನರು ಶೈಕ್ಷಣಿಕವಾಗಿ ಹಿಂದುಳಿದಿರುವಂತಹ ಜನರೇ ಆಗಿರುವುದರಿಂದ, ಈ ಪ್ರದೇಶ ಸಮಸ್ಯೆಗಳ ಕೂಪವೇ ಆಗಿದೆ.

ಸಾಮಾಜಿಕವಾಗಿ, ಆರ್ಥಿಕವಾಗಿ, ಹಿಂದುಳಿದ ಜನರು, ಸಮಾಜದ ಅತ್ಯಂತ ಕೆಳಸ್ತರದ ಜನರು ಇವರಾಗಿರುವುದರಿಂದ ಸಾಮಾನ್ಯವಾಗಿ ಇವರಿಗೆ ತಮ್ಮ ಹಿರಿಯರಿಂದ ಯಾವುದೇ ಆಸ್ತಿಯಾಗಲಿ, ಹಣವಾಗಲಿ, ಸ್ವಂತದ್ದಾಗಿರುವಂತಹ ಸ್ವತ್ತುಗಳಾದ, ಹಸು, ಎಮ್ಮೆ, ಕುರಿ, ಕೋಳಿ, ಅಥವಾ ಯಾವುದೇ ವಾಹನವಾಗಲಿ ಇವರ ಹಿಂದೆ ಇಲ್ಲ. ಸದಾ ದಾಸ್ಯದಲ್ಲಿಯೇ, ಬೆಳೆದಂತಹ ಜನರಿಗೆ ಆಸ್ತಿಯೆಂದರೆ ಅವರ ತೋಳ ಬಲವೇ ಆಗಿದೆ. ಆ ಬಲದಿಂದಲೇ ತಮ್ಮ ಮನೆಯ ಸದಸ್ಯರ ತುತ್ತಿನಚೀಲವನ್ನು ತುಂಬಿಸುತ್ತಿದ್ದಾರೆ. ದುಡಿಯಲು ಹೋಗಲೇಬೇಕಾದ ಅನಿವಾರ್ಯತೆ ಇವರಿಗಿದೆ. ಒಂದು ದಿನ ದುಡಿಯಲು ಹೋಗದಿದ್ದರೆ ಮನೆಯ ಸದಸ್ಯರೆಲ್ಲ ಉಪವಾಸವೇ ಇರಬೇಕಾಗುತ್ತದೆ. ಇಂತಹ ಪರಿಸ್ಥಿತಿ ಈ ನಗರದಲ್ಲಿ ಸಾಮಾನ್ಯ ಸಂಗತಿಯಾಗಿದೆ. ಬೆಳಿಗ್ಗೆ ದುಡಿದ ಹಣದಿಂದಲೇ ಸಂಜೆಯ ಆಹಾರವನ್ನು ಬೇಯಿಸಿಕೊಂಡು ತಿನ್ನುತ್ತಾರೆ. ಇಲ್ಲದಿದ್ದರೆ ಅವರಿವರ ಮನೆ ಮುಂದೆ ಅಕ್ಕಿ, ಬೇಳೆ, ಹಿಟ್ಟಿಗಾಗಿ, ಸಾಲ ಕೇಳಲು ನಿಲ್ಲಬೇಕಾದ ಅನಿವಾರ್ಯ ಪರಿಸ್ಥಿತಿ ಇವರಿಗಿದೆ. ಈ ಅನಿವಾರ್ಯ ಪರಿಸ್ಥಿಯು ಮಹಿಳೆಯರನ್ನು ದುಡಿಯುವಂತೆ ಮಾಡಿದೆ. ಪುರುಷರೊಂದಿಗೆ ಸಮಾನವಾಗಿ ದುಡಿಯುವ ಮಹಿಳೆಯರು ಮಳೆ, ಬಿಸಿಲು, ಚಳಿ, ಎನ್ನದೆ ತಮ್ಮ ಆರೋಗ್ಯವನ್ನು ಲೆಕ್ಕಿಸದೇ ದುಡಿಯುತ್ತಾರೆ. ಮಹಿಳೆಯರು ದುಡಿಯುವುದು ಅನಿವಾರ್ಯವಾಗಿದೆ. ಏಕೆಂದರೆ ಮನೆಯ ಯಜಮಾನನಾದ ಪುರುಷನು ತನ್ನ ಜವಾಬ್ದಾರಿಗಳಿಂದ ನುಣುಚಿಕೊಳ್ಳುತ್ತಿದ್ದಾನೆ, ತಾನು ದುಡಿದ ಹಣದಲ್ಲಿ ಅರ್ಧ ಮನೆಗೆ, ಇನ್ನರ್ಧ ಸಾರಾಯಿ ಅಂಗಡಿಗೆ ಇಡುತ್ತಿದ್ದಾನೆ. ಅವನನ್ನು ನಂಬಿ ಕುಳಿತ ಸದಸ್ಯರೆಲ್ಲರೂ ಉಪವಾಸವೇ ಇರಬೇಕಾಗುತ್ತದೆ. ಹೀಗೆ ಪುರುಷ ತನ್ನ ಜವಾಬ್ದಾರಿಯಿಂದ ನುಣುಚಿಕೊಂಡಾಗ, ಆ ಜವಾಬ್ದಾರಿಗಳು ಮಹಿಳೆಯ ಹೆಗಲೇರಿ ಬಿಡುತ್ತವೆ. ಮಹಿಳೆ ತನ್ನ ಜವಾಬ್ದಾರಿಯಿಂದ ತಪ್ಪಿಸಿಕೊಂಡು ಪರ್ಯಾಯ ಮಾರ್ಗ ಕಂಡುಕೊಳ್ಳುವಂತೆಯೇ ಇಲ್ಲ.

**ಶೈಕ್ಷಣಿಕ ಮಟ್ಟ**

ಈ ಪ್ರದೇಶದ ಜನರು ಕೂಲಿಯನ್ನ ಅವಲಂಬಿಸಿರುವುದರಿಂದ ಇವರಲ್ಲಿ ಹೆಚ್ಚಿನ ಜನರು ಅನಕ್ಷರಸ್ಥರಿದ್ದಾರೆ. ಕೇವಲ ಬೆರಳೆಣಿಕೆಯಷ್ಟು ಜನ ಮಾತ್ರ ಅಕ್ಷರಸ್ಥರಾಗಿದ್ದು ಯಾವುದೇ ಉದ್ಯೋಗವಿಲ್ಲದೇ ರಾಜಕೀಯ ಪಕ್ಷಗಳನ್ನು ಕಟ್ಟಿಕೊಂಡು, ಆ ಪಕ್ಷ ಈ ಪಕ್ಷವೆಂದು ಓಡಾಟ ನಡೆಸುವವರಾಗಿದ್ದಾರೆ. ತಮ್ಮ ಪ್ರದೇಶದ ಅಭಿವೃದ್ಧಿಗಾಗಿ ಅನೇಕ ಹೋರಾಟಗಳನ್ನು ಮಾಡಿಕೊಂಡು ಇದ್ದಾರೆ. ಈ ಪ್ರದೇಶದಲ್ಲಿ ಒಂದು ಪ್ರಾಥಮಿಕ ಶಾಲೆ, ಒಂದು ಅಂಗನವಾಡಿ ಕೇಂದ್ರವಿದೆ. ಇಲ್ಲಿ ಪ್ರೌಢಶಾಲೆಗಳು ಇಲ್ಲ. ಈ ಪ್ರದೇಶ ನಗರದಿಂದ ಹೊರಗೆ ಇರುವುದರಿಂದ ಮಕ್ಕಳು

ತಮ್ಮ ಹೆಚ್ಚಿನ ಶಿಕ್ಷಣಕ್ಕಾಗಿ ನಗರಕ್ಕೆ ಹೋಗಬೇಕಾಗುತ್ತದೆ. ಆದರೆ ವಿಪರ್ಯಾಸದ ಸಂಗತಿಯೆಂದರೆ ಈ ಪ್ರದೇಶದ ಮಕ್ಕಳು ಅಂಗನವಾಡಿ ಕೇಂದ್ರಕ್ಕಾಗಲಿ, ಪ್ರಾಥಮಿಕ ಶಾಲೆಗಾಗಲಿ ಹೋಗುವುದಿಲ್ಲ. ಇಲ್ಲಿರುವ ಶಿಕ್ಷಕರಿಗೆ ಮಕ್ಕಳನ್ನು ಶಾಲೆಗೆ ಕರೆತರುವಂತಹ ಕೆಲಸವಾಗಲಿ, ಅವರಿಗೆ ಪಾಠವನ್ನು ಬೋಧನೆ ಮಾಡುವುದಾಗಲಿ, ಮುತುವರ್ಜಿಯಿಂದ ಮಕ್ಕಳನ್ನು ಒಳ್ಳೆಯ ನಾಗರಿಕರನ್ನಾಗಿ ಮಾಡಬೇಕೆಂಬ ಆಸೆಯಾಗಲಿ ಇಲ್ಲ. ಮಕ್ಕಳು ಒಂದು ದಿನ ಶಾಲೆ ಬಿಟ್ಟರು, ಒಂದು ವಾರ ಶಾಲೆ ಬಿಟ್ಟರೂ ಮಕ್ಕಳನ್ನು ಕರೆಸಿ ಪ್ರಶ್ನೆ ಮಾಡುವುದಿಲ್ಲ. ಶಿಕ್ಷಕರ ಬೇಜವಾಬ್ದಾರಿತನದಿಂದಾಗಿ ಮಕ್ಕಳ ಭವಿಷ್ಯ ಚಿಂತಾಜನಕವಾಗಿರುವುದು ಸತ್ಯಸಂಗತಿಯಾಗಿದೆ. ಮೊದಲೇ ಅನಕ್ಷರಸ್ಥ ತಂದೆ ತಾಯಿಗಳು ಶಿಕ್ಷಣದ ಬಗ್ಗೆ ಇರುವ ಮಹತ್ವವನ್ನು ಅರಿಯದವರು ತಮ್ಮ ಮಕ್ಕಳನ್ನು ತಿದ್ದಿ ಬುದ್ಧಿ ಹೇಳಿ ಶಾಲೆಗೆ ಕಳಿಸುವುದು ದೂರದ ಮಾತು. ಇಂತಹ ಮಕ್ಕಳು ಮುಂದೆ ತಮ್ಮದೇ ಆದಂತಹ ಗುಂಪೊಂದನ್ನು ಕಟ್ಟಿಕೊಂಡು, ಬಾಲಾಪರಾಧಿಗಳಾಗುವ ಸಾಧ್ಯತೆಗಳಿವೆ. ತಂದೆ-ತಾಯಿಗಳ ಬೇಜವಾಬ್ದಾರಿತನದಿಂದಾಗಿ ಈ ಮಕ್ಕಳು ಸಮಾಜಕ್ಕೆ ಕಂಟಕರಾಗುವಲ್ಲಿ ಅನುಮಾನವೇ ಇಲ್ಲ. ಅಸಂತೃಪ್ತ ಬಾಲ್ಯದಿಂದಾಗಿ ಎಷ್ಟೋ ಜನ ಸಮಾಜ ಘಾತಕ ಕೆಲಸಗಳಲ್ಲಿ ಭಾಗಿಯಾಗಿರುವ ಉದಾಹರಣೆಗಳು ದೊರೆಯುತ್ತವೆ. ಚಿಕ್ಕವಯಸ್ಸಿನಲ್ಲಿಯೇ ತಂದೆ-ತಾಯಿ ಪ್ರೀತಿ, ವಿಶ್ವಾಸ, ಮಮತೆಯಿಂದ ದೂರ ಉಳಿದ, ಶಿಕ್ಷಣವನ್ನು ಪಡೆಯದ, ನೈತಿಕತೆಯೇ ಇಲ್ಲದಂತಹ ಮಕ್ಕಳಿಂದ ಹೆಚ್ಚಿನ ನೀರಿಕ್ಷೆಯು ಸತ್ಯಕ್ಕೆ ದೂರವಾದ ಮಾತಾಗಿದೆ. ಇದು ಈ ಪ್ರದೇಶದ ಶಿಕ್ಷಣದ ಸ್ಥಿತಿಯಾದರೆ ಇನ್ನು ಆರೋಗ್ಯದ ಸ್ಥಿತಿಯು ಇದಕ್ಕೆ ಹೊರತಾಗಿಲ್ಲ.

### ಆರೋಗ್ಯದ ಸ್ಥಿತಿಗತಿಗಳು

ಅಂಬೇಡ್ಕರ್‌ಆಶ್ರಯ ಕಾಲೋನಿ ಪ್ರದೇಶದಲ್ಲಿ ವಾಸಿಸುವ ಜನರಿಗೆ ಆರೋಗ್ಯದ ಬಗ್ಗೆ ಕಾಳಜಿಯಾಗಲಿ, ತಿಳುವಳಿಕೆಯಾಗಲಿ ಇಲ್ಲ. ಅವರ ಮನೋಧರ್ಮಕ್ಕೆ ನೈರ್ಮಲ್ಯವಿಲ್ಲದಂತಹ ವಾತಾವರಣ, ಅಶುದ್ಧವಾದ ನೀರು, ದುಶ್ಚಟಗಳಿಗೆ ದಾಸರಾದ ಪುರುಷರು ವರ್ಷಕ್ಕೊಂದರಂತೆ ಮಕ್ಕಳನ್ನು ಹೆರುವ ಮಹಿಳೆಯರು ಇವರೆಲ್ಲರನ್ನೂ ಒಟ್ಟಾಗಿಸಿ ನೋಡಿದಾಗ ಈ ಪ್ರದೇಶದ ಆರೋಗ್ಯದ ಸ್ಥಿತಿಯು ನಿಚ್ಚಳವಾಗಿ ಕಂಡುಬರುತ್ತದೆ. ಸದಾ ಹಾಸಿಗೆ ಹಿಡಿದು ಬಿದ್ದಿರುವ ವಯೋವೃದ್ಧರು. ಅನೇಕ ತಾಯಂದಿರು ಚಿಕ್ಕ ಮಗುವನ್ನು ಮನೆಯಲ್ಲಿ ಬಿಟ್ಟು ಹೊಟ್ಟೆಪಾಡಿಗಾಗಿ ಕೆಲಸಕ್ಕೆ ಹೋಗಬೇಕಾಗಿರುವುದರಿಂದ ಅವಶ್ಯಕವಾಗಿ ಬೇಕಾದ ತಾಯಿಯ ಹಾಲು ಮಗುವಿಗೆ ತಪ್ಪುವುದು. ಅದರ ಬೆಳವಣಿಗೆ ಕುಂಠಿತವಾಗುವುದು. ಅನೇಕ ಸಂದರ್ಭಗಳಲ್ಲಿ ಮಗುವಿಗೆ ಬೇಕಾಗುವ ಪೌಷ್ಠಿಕ ಆಹಾರವು ಸರಿಯಾದ ಪ್ರಮಾಣದಲ್ಲಿ ಸಿಗದೇ ಇದ್ದಾಗ, ಮಕ್ಕಳು ಕಡ್ಡಿಯಂತಾದ ಕೈಕಾಲು, ಡೊಳ್ಳುಹೊಟ್ಟೆ, ನಿಸ್ತೇಜ ಮುಖ, ಆಸೆಗಳೇ ಇಲ್ಲದ ಬಿಳುಚಿಕೊಂಡಿರುವಂತಹ ಕಣ್ಣುಗಳು, ಇವೆಲ್ಲ ದೃಶ್ಯ ಈ ಪ್ರದೇಶದಲ್ಲಿ ಕಾಣಸಿಗುತ್ತವೆ. ಮಕ್ಕಳಿಗೆ ಅವಶ್ಯಕವಾದ ಪೌಷ್ಠಿಕ ಆಹಾರವನ್ನು, ಎದೆಹಾಲನ್ನು ಕೊಡಬೇಕಾದ ತಾಯಿಯ ಹೊಟ್ಟೆ ಖಾಲಿಯಿರುವಾಗ ಮಗುವಿನ ಹೊಟ್ಟೆ ಹೇಗೆ ತುಂಬಿಸಿಯಾಳು.

ಈ ರೀತಿಯಾದ ಅನಾರೋಗ್ಯಕ್ಕೆ ಈ ಪ್ರದೇಶದ ನೈರ್ಮಲ್ಯರಹಿತವಾದ, ಕಲುಷಿತವಾದ ವಾತಾವರಣ ಒಂದು ಕಾರಣವಾದರೆ, ಅವಿರತ ದುಡಿಮೆ ಮತ್ತು ಬಡತನ ಇದರ ಇನ್ನೊಂದು ಕಾರಣವಾಗಿದೆ.

## ೧.೪ ಅಧ್ಯಯನದ ವಿಧಾನ

ನನ್ನ ಸಂಶೋಧನೆಯ ವಿಷಯವಾದ 'ಗುಲಬರ್ಗಾ ಕೊಳಚೆ ಪ್ರದೇಶದ ಮಹಿಳಾ ಬದುಕು' ಕುರಿತಾದ ಅಧ್ಯಯನವಾಗಿದ್ದು ಈ ಒಂದು ಪ್ರದೇಶಗಳ ಬಗ್ಗೆ ಅಧ್ಯಯನಗಳು ನಡೆದಿವೆ, ಆದರೆ ಈ ಪ್ರದೇಶದ ಮಹಿಳೆಯರ ಸ್ಥಿತಿಗತಿಗಳ ಕುರಿತು ಇನ್ನೂ ಹೆಚ್ಚಿನ ಅಧ್ಯಯನವಾಗಬೇಕಾಗಿದೆ ಎಂದುಕೊಂಡಿದ್ದೇನೆ. ಆದ್ದರಿಂದಲೇ ಈ ವಲಯದಲ್ಲಿ ಬರುವಂತಹ ಮಹಿಳಾ ಸ್ಥಿತಿಗಳನ್ನು ಸ್ತ್ರೀವಾದ, ಮಹಿಳಾ ಅಧ್ಯಯನ, ಇವುಗಳ ದೃಷ್ಟಿಕೋನದಿಂದ, ನಿರ್ದಿಷ್ಟವಾದ ಚೌಕಟ್ಟಿನೊಳಗೆ ಅಧ್ಯಯನವನ್ನು ಕೈಗೊಂಡಿದ್ದೇನೆ.

ನನ್ನ ಸಂಶೋಧನೆಯ ವಿಷಯವಾಗಿರುವ 'ಗುಲಬರ್ಗಾ ಕೊಳಚೆ ಪ್ರದೇಶದ ಮಹಿಳಾ ಬದುಕು' ಎಂಬ ವಿಷಯವನ್ನು ಸಂಪ್ರಬಂಧ ರೂಪದಲ್ಲಿ ಮಂಡಿಸಲು ಈ ಕೆಳಗಿನ ಸಂಶೋಧನಾ ವಿಧಾನವನ್ನು ಅನುಸರಿಸಲು ಬಯಸಿದ್ದೇನೆ.

**ಅ. ಪ್ರಶ್ನಾವಳಿ :** ನನ್ನ ಸಂಶೋಧನಾ ವಿಷಯಕ್ಕೆ ಸಂಬಂಧಿಸಿದಂತೆ ಮಾಹಿತಿ ಪಡೆಯಲು ನಾನು ಆಯ್ದುಕೊಂಡ ಕ್ಷೇತ್ರದಲ್ಲಿ, ಕ್ಷೇತ್ರದ ಅಧ್ಯಯನದಲ್ಲಿ ಕಾರ್ಯಕೈಗೊಂಡಾಗ, ಆ ಪ್ರದೇಶದ ಮಹಿಳೆಯರ ಆರೋಗ್ಯಕ್ಕೆ ಮತ್ತು ಆರ್ಥಿಕತೆಗೆ ಸಂಬಂಧಿಸಿದಂತಹ ಮಾಹಿತಿ ಪಡೆಯಲು ಅತ್ಯಂತ ಸೂಕ್ತವಾದಂತಹ ಪ್ರಶ್ನಾವಳಿಯನ್ನು ಸಿದ್ಧಪಡಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗುವುದು.

**ಬ. ಅವಲೋಕನ :** ನನ್ನ ಸಂಶೋಧನಾ ವಿಷಯಕ್ಕೆ ಸಂಬಂಧಿಸಿದಂತೆ ನಾನು ಆಯ್ದುಕೊಂಡಿರುವಂತಹ ಪ್ರದೇಶದಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಂಡಾಗ ಅಲ್ಲಿಯ ಮಹಿಳೆಯರ ಸ್ಥಿತಿ-ಗತಿಗಳ ಬಗ್ಗೆ ಸೂಕ್ಷ್ಮವಾಗಿ ಅವಲೋಕಿಸುವುದು.

**ಕ. ಮಾಹಿತಿಯ ಆಕರಗಳು :** ಮೂಲ ಆಕರ ಕ್ಷೇತ್ರಕಾರ್ಯದ ಮೂಲಕ ಮಾಹಿತಿ ಸಂಗ್ರಹಿಸುವುದು ಆಗಿದ್ದು, ಇದಕ್ಕೆ ಮುಖ್ಯವಾಗಿ ಪ್ರಶ್ನಾವಳಿಗಳು ಹಾಗೂ ಸಂದರ್ಶನಗಳ ವೈಧಾನಿಕತೆಗಳನ್ನು ಅನ್ವಯಿಸಲಾಗುವುದು.ಇಡೀ ಸಂಪ್ರಬಂಧ ಕ್ಷೇತ್ರಕಾರ್ಯವನ್ನೇ ಆಧರಿಸಿದೆ. ಆನುಷಂಗಿಕ ಆಕರಗಳು ನನ್ನ ಸಂಶೋಧನಾ ವಿಷಯಕ್ಕೆ ಸಂಬಂಧಿಸಿದಂತಹ ನಿಯತಕಾಲಿಕೆಗಳು, ವೃತ್ತಪತ್ರಿಕೆ, ವಾರಪತ್ರಿಕೆ, ವರದಿಗಳು, ಮಾಸಿಕ, ದ್ವೈಮಾಸಿಕ, ತ್ರೈಮಾಸಿಕ, ಷಣ್ಮಾಸಿಕ ಮೊದಲಾದವುಗಳನ್ನು ಗಮನಿಸಿ ಪೂರಕ ಮಾಹಿತಿಯನ್ನು ಸಂಗ್ರಹಿಸಲಾಗುವುದು.

ಸಂಶೋಧನಾ ಪ್ರಬಂಧ/ಮಹಾಪ್ರಬಂಧಗಳನ್ನು ಅಧ್ಯಯನ ಮಾಡಿ ನನ್ನ ವಿಷಯಕ್ಕೆ ಸಂಬಂಧಿಸಿದ ಇನ್ನಿತರ ಅಕೆಡೆಮಿಕ್ ಮಾಹಿತಿಯನ್ನು ಪಡೆದುಕೊಳ್ಳುವುದು ಅಥವಾ ಸಂಗ್ರಹಿಸುವುದು.

**ಡ. ಸಂದರ್ಶನ ವಿಧಾನ :** ನನ್ನ ಸಂಶೋಧನಾ ವಿಷಯಕ್ಕೆ ಸಂಬಂಧಿಸಿದಂತೆ ಕೊಳಚೆ ಪ್ರದೇಶಕ್ಕೆ ಭೇಟಿ ಕೊಟ್ಟು, ಅಲ್ಲಿರುವ ಮಹಿಳೆಯರ ಸ್ಥಿತಿಗತಿಗಳ ಬಗ್ಗೆ, ಅವರ ಇನ್ನುಳಿದ ಆರೋಗ್ಯದ ಮತ್ತು ಆರ್ಥಿಕತೆಗೆ ಸಂಬಂಧಪಟ್ಟಂತಹ ಸಂದರ್ಶನವನ್ನು ನಡೆಸಿ ಮಾಹಿತಿಯನ್ನು ಪಡೆಯುವುದು.

**ಟಿಪ್ಪಣಿಗಳು**

೧. ಮಲ್ಲಿಕಾ ಘಂಟಿ, ಅಂಬೇಡ್ಕರ್ ಮತ್ತು ಮಹಿಳೆ, : (ಸಂ) ಕೆ.ವೆಂಕಟೇಶ, ಅಂಬೇಡ್ಕರ್ ಒಂದು ಮರುವ್ಯಾಖ್ಯಾನ, ೨೦೦೫, ಪುಟ ೭೪

೨. ಶ್ಯಾಂಚರಣ ದುಬೆ : ಭಾರತೀಯ ಸಮಾಜ : ೧೯೯೦, ಪುಟ ೧೩೪

೩. ಮೈಥಿಲಿ ಶಿವರಾಮನ್ (ಮೂಲ) : ವಿಮೋಚನೆಯೆಡೆಗೆ : (ಅನು) ಬಿ.ಎನ್.ಸುಮಿತ್ರಾಬಾಯಿ, ವಿಜಯಾ ದಬ್ಬೆ, ೧೯೮೬, ಪುಟ ೩

೪. ಛಾಯಾದಾತಾರ್ (ಮೂಲ) : ಸ್ತ್ರೀ ಪುರುಷ : (ಅನು) ಸರಸ್ವತಿ ರಿಸಬೂಡ, ೧೯೯೨

೫. ಆಶಾದೇವಿ ಎಂ.ಎಸ್. : ಸ್ತ್ರೀ ಮತವನುತ್ತರಿಸಲಾಗದೆ? ಸಾಹಿತ್ಯ ಸಂಸ್ಕೃತಿ ಕುರಿತು ಲೇಖನಗಳು: ೨೦೦೬, ಪುಟ ೧೨೦

೬. ಮ.ನ.ಜವರಯ್ಯ : ಅಂಬೇಡ್ಕರ್ ಮತ್ತು ಸಾಮಾಜಿಕ ನ್ಯಾಯ : ೧೯೯೫, ಪುಟ ೩೭೭

೭. ಆಧುನಿಕ ಸಮಾಜ ಹಾಗೂ ಕೌಟುಂಬಿಕ ಜೀವನದ ಬದಲಾವಣೆಗಳು, ಆರು ಉಪನ್ಯಾಸಗಳು, ೧೯೮೬, ಪುಟ ೯೪

೮. ಅದೇ, ಪುಟ ೯೫

ಅಧ್ಯಾಯ : ಎರಡು

# ಕೊಳಚೆ ಪ್ರದೇಶದ ಮಹಿಳಾ ಬದುಕು : ನಿರ್ವಚನ ಹಾಗೂ ವ್ಯಾಖ್ಯಾನ

೨.೧. ಕೊಳಚೆ ಪ್ರದೇಶದ ನಿರ್ವಚನ

೨.೨. ಕರ್ನಾಟಕ ಕೊಳಚೆ ಪ್ರದೇಶ ನಿರ್ಮೂಲನ ಮಂಡಳಿ ಮತ್ತು ಅದರ ಕಾರ್ಯ ಸ್ವರೂಪ

೨.೩. ಗುಲಬರ್ಗಾ ನಗರದ ಕೊಳಚೆ ಪ್ರದೇಶಗಳು

೨.೪. ಕೊಳಚೆ ಪ್ರದೇಶದ ಮಹಿಳಾ ಬದುಕು : ಒಂದು ಸ್ತ್ರೀವಾದಿ ವ್ಯಾಖ್ಯಾನ

## ಅಧ್ಯಾಯ : ಎರಡು

# ಕೊಳಚೆ ಪ್ರದೇಶದ ಮಹಿಳಾ ಬದುಕು : ನಿರ್ವಚನ ಹಾಗೂ ವ್ಯಾಖ್ಯಾನ

### ೨.೧ ಕೊಳಚೆ ಪ್ರದೇಶದ ನಿರ್ವಚನ

ಭಾರತ ಸಂವಿಧಾನವು ರೂಪಿಸಿದ ರಾಜ್ಯಾಂಗದಲ್ಲಿ ಸರ್ವರಿಗೂ ಸಮಪಾಲು, ಸಮಬಾಳು, ಸಮಾನತೆ, ಸ್ವಾತಂತ್ರ್ಯ ಎಂಬ ಮೂಲಮಂತ್ರಗಳನ್ನು ಘೋಷಿಸಲಾಗಿದೆ. ಆದರೆ ಈ ಮೂಲಮಂತ್ರಗಳಾದ, ಸಂಪನ್ಮೂಲಗಳ ಸಮಾನ ಹಂಚಿಕೆ, ಸಮಾನ ಅವಕಾಶ, ದಮನಿತರಿಗೆ ವಿಶೇಷ ಸವಲತ್ತು, ಶಿಕ್ಷಣಕ್ಕೆ ಆದ್ಯತೆ, ಮಕ್ಕಳು ಮತ್ತು ಮಹಿಳೆಯರ ರಕ್ಷಣೆ ಮತ್ತು ಅಭಿವೃದ್ಧಿ, ಧರ್ಮ ಸಹಿಷ್ಣುತೆಗಳನ್ನೊಳಗೊಂಡ ಗೌರವಾನ್ವಿತ ಬದುಕು ಭಾರತದ ಎಲ್ಲಾ ನಾಗರೀಕರಿಗೂ ಲಭ್ಯವಾಗಬೇಕು ಎನ್ನುವ ಸಂವಿಧಾನದ ಮೂಲ ಆಶಯಕ್ಕೆ ವ್ಯತಿರಿಕ್ತವಾದಂತಹ ಘಟನೆಗಳು ನಡೆಯುತ್ತಿವೆ.

ಸಂವಿಧಾನದ ಸಮಬಾಳು, ಸಮಪಾಲು ಈ ಅವಕಾಶಗಳು ನಗರಗಳಲ್ಲಿ ವಾಸಿಸುವ ಮೇಲ್ವರ್ಗದವರಿಗೆ ಮತ್ತು ಬಂಡವಾಳಶಾಹಿಗಳಿಗೆ ಮಾತ್ರ ದಕ್ಕುತ್ತಿವೆ. ಗ್ರಾಮ ಮತ್ತು ನಗರಗಳ ಬಡವರ ಬದುಕು ಅತಂತ್ರವಾಗುತ್ತಿದೆ. ಅಭದ್ರತೆಯ, ಆತಂಕದ ಜೀವನ ಸಾಗಿಸುತ್ತಿದ್ದಾರೆ. ಜಮೀನ್ದಾರಿ ಪದ್ಧತಿಯು ತನ್ನ ಕಪಿಮುಷ್ಠಿಯಲ್ಲಿ ಬಡವರನ್ನು ತೆಗೆದುಕೊಂಡು ಶೋಷಿತರ ಮೇಲೆ ಶೋಷಣೆಯನ್ನು ಮಾಡುತ್ತಾ ತನ್ನ ಮುಷ್ಠಿಯನ್ನು ಮತ್ತಷ್ಟು ಬಿಗಿಗೊಳಿಸಿಕೊಳ್ಳುತ್ತಿದೆ. ಜಮೀನ್ದಾರಿ ಪದ್ಧತಿಯು ಧರ್ಮದ ಹೆಸರಿನಲ್ಲಿ ತನ್ನ ಪ್ರಭುತ್ವವನ್ನು ಮೆರೆಯುತ್ತಿದೆ. ಹಿಂದೆ ಜಮೀನ್ದಾರನು ತನ್ನ ಭೂಮಾಲಿಕತ್ವದಿಂದ ಆರ್ಥಿಕವಾಗಿ ಶ್ರೇಷ್ಠನೆನಿಸಿದ್ದು ಪ್ರಬಲನಾಗಿದ್ದನು. ವರ್ಗ ಮತ್ತು ವರ್ಣದಿಂದ ಕೆಳಜಾತಿಯವರಾದ ಜನರು ದುರ್ಬಲರಾಗಿ, ಮೇಲ್ವರ್ಗದವರ ಸೇವೆಯನ್ನು ಮಾಡುತ್ತಾ ಅವರ ಮನೆ, ಹೊಲಗಳಲ್ಲಿ ಜೀತದಾಳುಗಳಾಗಿ ದುಡಿಯುವವರಾದರು.

"ನಮ್ಮ ದೇಶ ಹಳ್ಳಿಗಳ ದೇಶವಾಗಿದೆ, ನಮ್ಮ ದೇಶವನ್ನು ಕಾಣಬೇಕಾದರೆ ಅದು ಹಳ್ಳಿಗಳಲ್ಲಿ" ಎಂದು ಮಹಾತ್ಮರು ಹೇಳಿದ್ದಾರೆ. ನಮ್ಮದು ಕೃಷಿ ಪ್ರಧಾನವಾದ ದೇಶವಾಗಿದ್ದು ಶೇಕಡಾ ೭೫ರಷ್ಟು ರೈತರು ಈ ಕೃಷಿಯನ್ನು ಅವಲಂಬಿಸಿದ್ದಾರೆ. ಅವರ ಕುಟುಂಬದ ಮೂಲ ಆಧಾರ ಕೃಷಿಯೇ ಆಗಿದೆ ಎನ್ನುವುದರಲ್ಲಿ ಎರಡು ಮಾತಿಲ್ಲ. ಆದರೆ ಬಂಡವಾಳಶಾಹಿಯು ದೇಶದಲ್ಲಿ ಪಾದಾರ್ಪಣೆ ಮಾಡಿ ತನ್ನ ರೆಂಬೆ-ಕೊಂಬೆಗಳನ್ನು ದಿನದಿಂದ ದಿನಕ್ಕೆ ವಿಸ್ತರಿಸಿಕೊಳ್ಳುತ್ತಲೇ ಇದೆ. ಹೊಸ, ಹೊಸ ಉದ್ಯೋಗಗಳು ಸೃಷ್ಟಿಯಾಗುತ್ತಲಿವೆ. ಮಾಹಿತಿ ತಂತ್ರಜ್ಞಾನಗಳು ಬೃಹದಾಕಾರವಾಗಿ ಬೆಳೆಯತೊಡಗಿವೆ. ಇದರ ಪರಿಣಾಮವಾಗಿ ಅನ್ನದಾತ ರೈತ ಮೂಲೆ ಗುಂಪಾಗುತ್ತಿದ್ದಾನೆ. ಕೃಷಿಗೆ ಪೂರಕವಲ್ಲದ ವಾತಾವರಣದಿಂದ ತತ್ತರಿಸಿ, ಹೋಗಿ ಆತ್ಮಹತ್ಯೆಗೆ ಶರಣಾಗುತ್ತಿದ್ದಾನೆ. ಲೋಕಕ್ಕೆಲ್ಲ ಅನ್ನ ನೀಡುವ ಅನ್ನದಾತನಾದವನು ತುತ್ತು ಅನ್ನಕ್ಕೆ ಪರದಾಡುವ ಸ್ಥಿತಿ ಎದುರಾಗಿದೆ. ಇಂತಹ ಸ್ಥಿತಿ ಒಂದು ಕಡೆಯಾದರೆ, ಕೃಷಿ ಕಾರ್ಮಿಕರು, ಕೂಲಿಯೂ ದೊರೆಯದೇ ಕೂಳಿಗಾಗಿ ದುಡಿಮೆ ಅರಸುತ್ತ ತಮ್ಮ ಊರುಬಿಟ್ಟು ನಗರ ಪ್ರದೇಶಗಳಿಗೆ ವಲಸೆ ಹೋಗುವುದು, ವಾಸಕ್ಕೆ ಯೋಗ್ಯವಲ್ಲದ ತಾಣಗಳಲ್ಲಿ ಬೀಡುಬಿಟ್ಟು ಅತ್ತ ಬದುಕಲು ಆಗದೇ, ಇತ್ತ ಸಾಯಲೂ ಆಗದೆ ಅತಂತ್ರ ಸ್ಥಿತಿಯಲ್ಲಿ ಬದುಕುತ್ತಿದ್ದಾರೆ. ಹಳ್ಳಿಗಳಿಂದ ಪಟ್ಟಣಕ್ಕೆ ಬರುವವರ ಸಂಖ್ಯೆಯು ದಿನೇದಿನೇ ಹೆಚ್ಚಾಗುತ್ತಿದೆ.

"ಒಂದು ಅಂದಾಜಿನಂತೆ ೨೦೧೧ರ ಜನಗಣತಿಯ ಪ್ರಕಾರ ರಾಜ್ಯದ ೨೨೬ ನಗರ ಪಟ್ಟಣಗಳ ಒಟ್ಟು ಜನಸಂಖ್ಯೆ ಸುಮಾರು ೧ ಕೋಟಿ ೮೦ ಲಕ್ಷ ದಾಟಿದೆ. ಅಂದರೆ ರಾಜ್ಯದ ಜನಸಂಖ್ಯೆ ಶೇಕಡಾ ೩೪ರಷ್ಟು ನಗರ ಪಟ್ಟಣ ಪ್ರದೇಶಗಳಲ್ಲಿರುವುದು. ಇಡೀ ರಾಜ್ಯದ ಎಲ್ಲಾ ನಗರ ಪಟ್ಟಣಗಳಲ್ಲಿ ಸುಮಾರು ೪೫೦೦ ಕೊಳಚೆ ಪ್ರದೇಶಗಳಿರುವುದಾಗಿದೆ. ನಗರ ಪಟ್ಟಣಗಳ ಜನಸಂಖ್ಯೆಯ ಸುಮಾರು ೬೦ ಲಕ್ಷದಷ್ಟು ಅಂದರೆ ಶೇ.೩೩ರಷ್ಟು ಜನಸಂಖ್ಯೆ ಕೊಳಚೆ ಪ್ರದೇಶಗಳಲ್ಲಿ ವಾಸಿಸುತ್ತಿದ್ದಾರೆ."[೧]

ಕೊಳಚೆ ಪ್ರದೇಶಗಳು ಭಾರತಕ್ಕಷ್ಟೆ ಸೀಮಿತವಾಗಿರದೇ ಇಡೀ ವಿಶ್ವದ, ಒಂದು ಸಾರ್ವತ್ರಿಕವಾದ ಸಮಸ್ಯೆಯಾಗಿದೆ. ಈ ಪ್ರದೇಶಗಳ ಸಂಖ್ಯೆ ದಿನೇ ದಿನೇ ಹೆಚ್ಚಾಗುತ್ತಿದೆ. ಹಳೆಯ ಕೊಳಚೆ ಪ್ರದೇಶಗಳನ್ನು ನಿರ್ಮೂಲನ ಮಾಡುವ ಹೊತ್ತಿಗೆ ಹೊಸ ಕೊಳಚೆ ಪ್ರದೇಶಗಳು ಹುಟ್ಟಿಕೊಳ್ಳುತ್ತಲಿವೆ. ನಗರಗಳು ಬೆಳೆದಂತೆಲ್ಲಾ, ಕೊಳಚೆ ಪ್ರದೇಶಗಳು ಸೃಷ್ಟಿಯಾಗುತ್ತಿವೆ. ಹೆಚ್ಚು ಹೆಚ್ಚು ನಗರಗಳು, ಹೆಚ್ಚು ಹೆಚ್ಚು ಕೊಳಚೆ ಪ್ರದೇಶಗಳ ಹುಟ್ಟಿಗೆ ಕಾರಣವಾಗುತ್ತಿವೆ.

ನಗರಗಳಲ್ಲಿ ವಾಸಿಸುತ್ತಿರುವ ಒಂದು ಜನ ಸಮುದಾಯದವರು ಶ್ರೀಮಂತರಾಗುತ್ತಾ ಹೋಗುತ್ತಿದ್ದಾರೆ. ಇರುವ ಸೌಲಭ್ಯಗಳನ್ನು, ಅವಕಾಶಗಳನ್ನು ಪಡೆದುಕೊಳ್ಳುವಲ್ಲಿ ಅವರದು ಸಿಂಹಪಾಲಾಗಿದೆ. ಅದೇ ನಗರದ ಇನ್ನೊಂದು ಜನಸಮುದಾಯ ಬಡವರಾಗಿ ಅವಕಾಶಗಳಿಂದ ವಂಚಿತರಾಗಿ ಬದುಕುತ್ತಿದ್ದಾರೆ. ಇದಕ್ಕೆ ಕಾರಣಗಳನ್ನು ಶೋಧ ಮಾಡಿದರೆ ಸಿಗುವ ಉತ್ತರ ಸ್ಪಷ್ಟವಾಗಿರುತ್ತದೆ. ಈ ನಗರದ ಜನರು ವರ್ಗ ಮತ್ತು ವರ್ಣದಿಂದ ಕೆಳವರ್ಗದವರಾಗಿದ್ದು ಜಮೀನ್ದಾರಿ ಪದ್ಧತಿಯ ಹೊಸ ರೂಪವಾಗಿ

ಜನ್ಮ ತಳೆದ ಬಂಡವಾಳಶಾಹಿ ವ್ಯವಸ್ಥೆಯ ರಾಜ ಕಾರಣದಿಂದಾಗಿ ಸರಕಾರದವರ ಬೇಜವಾಬ್ದಾರಿತನದಿಂದಾಗಿ ಈ ನಗರದ ಜನರಿಗೆ ಅವಕಾಶಗಳ ಬಗ್ಗೆ ಸೂಕ್ತವಾದ ಮಾಹಿತಿ ಇರದೇ ಇರುವುದರಿಂದ ತೀರಾ ಸಂಕಷ್ಟಕ್ಕೆ ಗುರಿಯಾಗಿ ಬಡವರಾಗಿಯೇ ಉಳಿಯುತ್ತಿದ್ದಾರೆ.

ಜೇಮ್ಸ್ ಫೋರ್ಡ್ ಅವರು ಕೊಳಚೆ ಪ್ರದೇಶಗಳ ಬಗ್ಗೆ ಹೀಗೆ ಹೇಳುತ್ತಾರೆ. "ಕೊಳಚೆ ಪ್ರದೇಶವು ಅಲ್ಲಿನ ನಿವಾಸಿಗಳ, ಆರೋಗ್ಯ, ರಕ್ಷಣೆ, ನೈತಿಕ ಅಥವಾ ಕಲ್ಯಾಣಕ್ಕೆ ಮಾರಕವೆನಿಸುವಷ್ಟರ ಮಟ್ಟಿಗೆ ಕ್ಷೀಣಿಸಿರುವ ಕಳಪೆ ಮಟ್ಟದ ಅಥವಾ ಅನಾರೋಗ್ಯಪೂರ್ಣವಾದ ವಾಸದ ಪ್ರದೇಶದ" ಎಂದಿದ್ದಾರೆ. ಬರ್ಗೆಲ್ ಅವರು ಕೂಡ ಹೀಗೆ ಬರೆಯುತ್ತಾರೆ. "ಕೊಳಚೆ ಪ್ರದೇಶವು ಕಳಪೆ ಮಟ್ಟದ ನಿವಾಸ ಸ್ಥಿತಿಯನ್ನು ಹೊಂದಿರುವ ನಗರದಲ್ಲಿನ ಒಂದು ಪ್ರದೇಶ, ಕೊಳಚೆ ಪ್ರದೇಶವು ಯಾವಾಗಲೂ ಒಂದು ಪ್ರದೇಶವೇ ಹೊರತು ಯಾವುದೇ ಒಂದು ನಿರ್ಲಕ್ಷಿತ ಕಟ್ಟಡವು ಮಾತ್ರ ಕೊಳಚೆ ಪ್ರದೇಶವೆನಿಸಲಾರದು."[3]

## ಕೊಳಚೆ ಪ್ರದೇಶದ ಲಕ್ಷಣಗಳು

ಹಿಂದುಳಿದ ವರ್ಗದ ಜನರು ವಾಸಿಸುತ್ತಿರುವ, ವ್ಯವಸ್ಥಿತವಾಗಿರದ ಕಟ್ಟಡಗಳು, ರಸ್ತೆಗಳು ಹೀಗೆ ಅನೇಕ ಸೌಲಭ್ಯಗಳಿಂದ ವಂಚಿತವಾಗಿರುವಂತಹ ಪ್ರದೇಶಗಳನ್ನು ಸರಕಾರದವರು ಕೊಳಚೆ ಪ್ರದೇಶಗಳೆಂದು ಘೋಷಣೆ ಮಾಡುತ್ತಾರೆ. ಈ ಪ್ರದೇಶಗಳಲ್ಲಿ ವಾಸಿಸುವ ಜನರು ಆರ್ಥಿಕತೆಯ ಹಿನ್ನೆಲೆಯಿಂದ ದುರ್ಬಲರಾಗಿದ್ದು ತಮ್ಮ ಕುಟುಂಬದೊಡನೆ ವ್ಯವಸ್ಥಿತವಾಗಿರುವಂತಹ ಮನೆಗಳಲ್ಲಿ ವಾಸಿಸಲು ಯೋಗ್ಯತೆ ಇಲ್ಲದಿರುವುದರಿಂದ ತಾತ್ಕಾಲಿಕವಾದಂತಹ ಗುಡಿಸಲುಗಳನ್ನು ನಿರ್ಮಿಸಿಕೊಳ್ಳುತ್ತಾರೆ. ಈ ಗುಡಿಸಲುಗಳಿರುವ ಪ್ರದೇಶಗಳು ಮುಂದೆ ಬೃಹದಾಕಾರವಾಗಿ ಬೆಳೆದು ಕೊಳಚೆ ಪ್ರದೇಶಗಳಾಗಿ ಮಾರ್ಪಡುತ್ತವೆ. ಈ ಕುಟುಂಬಗಳು ಕಾರಣಾಂತರಗಳಿಂದ ಬೇರೆ ಪ್ರದೇಶಗಳಿಂದ ಮತ್ತು ಗ್ರಾಮೀಣ ಪ್ರದೇಶಗಳಿಂದ ವಲಸೆ ಬಂದವರಾಗಿರುತ್ತಾರೆ. ಈ ಪ್ರದೇಶದ ಜನರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಅಸಂಘಟಿತ ವಲಯದ ಕೆಲಸಗಳಾದ, ಕಟ್ಟಡ ನಿರ್ಮಾಣ, ರಸ್ತೆಗಳ ನಿರ್ಮಾಣ, ಕಾರ್ಖಾನೆಗಳಲ್ಲಿ, ಗೋದಾಮುಗಳಲ್ಲಿ ಹೀಗೆ ಇನ್ನೂ ಅನೇಕ ಉದ್ಯೋಗಗಳಲ್ಲಿ ದುಡಿಯುವವರು ಆಗಿರುತ್ತಾರೆ. ಕೆಲವೇ ಕೆಲವು ಜನರನ್ನು ಮಾತ್ರ ಸಂಘಟಿತ ವಲಯದ ಉದ್ಯೋಗಗಳಾದ ಮಹಾನಗರ ಪಾಲಿಕೆಯಲ್ಲಿ, ಸರಕಾರಿ ಕಛೇರಿಗಳಲ್ಲಿ ನೈರ್ಮಲ್ಯವನ್ನು ಕಾಪಾಡಿಕೊಂಡು ಹೋಗುವಂತಹ ಉದ್ಯೋಗಿಗಳಾಗಿರುತ್ತಾರೆ. ಈ ಎಲ್ಲ ದುಡಿಮೆ ಕಾರ್ಮಿಕರು ವಾಸಿಸುವುದು ಈ ಕೊಳಚೆ ಪ್ರದೇಶಗಳಲ್ಲಿಯೇ, ತಮಗೆ ಬರುವ ಸಂಬಳದಲ್ಲಿ ಮನೆಯ ಖರ್ಚು ವೆಚ್ಚವನ್ನೆಲ್ಲ ನೋಡಿಕೊಂಡು ಹೊಟ್ಟೆ ತುಂಬಿಸಿಕೊಳ್ಳುವುದೇ ಕಷ್ಟವಾಗಿರುತ್ತದೆ. ನಗರದಲ್ಲಿ ಒಂದು ಮನೆಯನ್ನು ಬಾಡಿಗೆಯಾಗಿ ಪಡೆದು ಮುಂಗಡವಾಗಿ ಹಣ ಪಾವತಿಸುವುದು ಕಷ್ಟದ ಮಾತಾಗಿರುವುದರಿಂದ, ಇಂತಹ ಜನರ ವಾಸಸ್ಥಾನ ಮೂಲ ಇಂತಹ ಕೊಳಚೆ ಪ್ರದೇಶಗಳೇ ಆಗಿರುವುದು ಅನಿವಾರ್ಯವಾಗಿದೆ.

ಕೊಳಚೆ ಪ್ರದೇಶಗಳನ್ನು ಕೆಲವೊಂದು ಲಕ್ಷಣಗಳನ್ನು ಹೀಗೆ ಗುರುತಿಸಬಹುದಾಗಿದೆ:

೧. **ವಸತಿಯ ಸಮಸ್ಯೆ ಅಥವಾ ಕೊರತೆ :** ಈ ಪ್ರದೇಶಗಳಲ್ಲಿ ವಾಸಿಸುವ ಜನರು ದಿನಗೂಲಿ ಕಾರ್ಮಿಕರಾಗಿರುವುದರಿಂದ ಅವರು ದುಡಿದು ತರುವ ಸಂಬಳ ಮನೆಯ ಖರ್ಚು ವೆಚ್ಚಕ್ಕೆ ಸರಿ ಹೊಂದುತ್ತದೆ. ಇಂತಹ ಸಂದರ್ಭದಲ್ಲಿ ತಮ್ಮ ಆದಾಯದ ಹಣದಲ್ಲಿ ಉಳಿತಾಯ ಮಾಡುವುದು ಸಾಧ್ಯವಿರದ ಮಾತು. ಹೀಗಿರುವಾಗ ಈ ಕಾರ್ಮಿಕರೆಲ್ಲರು ತಮಗೆ ದೊರೆತ ಸ್ಥಳಗಳಲ್ಲಿ ತಾತ್ಕಾಲಿಕವಾದ ಗುಡಿಸಲುಗಳನ್ನು ನಿರ್ಮಾಣ ಮಾಡಿಕೊಂಡು ವಾಸಿಸುತ್ತಾರೆ. ಇವರಿಗೆ ಪಟ್ಟಣದಲ್ಲಿ ದುಬಾರಿಯಾಗಿರುವ ಮನೆಯನ್ನು ಮಾಡಿಕೊಳ್ಳುವುದು ಕಷ್ಟದ ಮಾತಾಗಿದೆ. ಹೀಗಾಗಿ ಇವರು ಎದುರಿಸುವ ಅನೇಕ ಸಮಸ್ಯೆಗಳಲ್ಲಿ ಇದು ಮೊದಲ ಸಮಸ್ಯೆಯಾಗಿದೆ.

೨. **ಅತಿಯಾದ ಜನಸಂಖ್ಯೆ :** ಅತಿಯಾದ ಜನಸಂಖ್ಯೆಯು ಈ ಪ್ರದೇಶದ ಇನ್ನೊಂದು ಲಕ್ಷಣವೆನಿಸಿದೆ. ಒಂದು ಮನೆಯಲ್ಲಿ ಮಕ್ಕಳಿಂದ ಹಿಡಿದು ವೃದ್ಧರವರೆಗೂ ಎಲ್ಲರೂ ಒಂದೇ ಸೂರಿನಡಿಯಲ್ಲಿ ವಾಸಿಸುತ್ತಿರುತ್ತಾರೆ. ಈ ಪ್ರದೇಶದಲ್ಲಿ ವಾಸಿಸುವ ಜನರಿಗೆ ಸಂತಾನಹರಣ ಚಿಕಿತ್ಸೆ ಅಥವಾ ಕುಟುಂಬ ಕಲ್ಯಾಣ ಯೋಜನೆಯ ಬಗ್ಗೆ ಯಾವುದೇ ಮಾಹಿತಿ ಇರುವುದಿಲ್ಲ. ಮಕ್ಕಳು ದೇವರು ಕೊಟ್ಟ ಪ್ರಸಾದವೆಂದು ಎಲ್ಲಿಯವರೆಗೂ ಮಕ್ಕಳನ್ನು ಕರುಣಿಸುತ್ತಾನೋ ಅಲ್ಲಿಯವರೆಗೂ ಮಕ್ಕಳನ್ನು ಹೆರಬೇಕು ಎನ್ನುವ ಧೋರಣೆ ಮನೆಯ ಹಿರಿಯರ ಮತ್ತು ಗಂಡಸದಾಗಿರುವುದರಿಂದ ಮನೆ ತುಂಬ ಮಕ್ಕಳಾಗಿ ಮುಂದೆ ದೊಡ್ಡ ಜನಸಂಖ್ಯೆಯಾಗುತ್ತದೆ. ಈ ಪ್ರದೇಶದಲ್ಲಿ ವಾಸಿಸುವವರು ಹೆಚ್ಚಾಗಿ ಕೆಳವರ್ಗದವರಾಗಿದ್ದು ಈ ಕೆಳವರ್ಗದವರಲ್ಲಿಯೇ ಬೇರೆ ಬೇರೆ ಜಾತಿ, ಸಂಸ್ಕೃತಿ, ಜನಾಂಗ, ಸಮೂಹ ಹಾಗೂ ಪ್ರದೇಶದವರು ವಾಸಿಸುವುದು ಕಾಣಸಿಗುತ್ತದೆ. ಅಲ್ಲದೆ ಭಿಕ್ಷುಕರು, ರೋಗಿಗಳು, ಮಾನಸಿಕವಾಗಿ ಅಸ್ವಸ್ಥರಾಗಿರುವವರ ವಾಸ ಕೂಡ ಈ ಕೊಳಚೆ ಪ್ರದೇಶವೇ ಆಗಿದೆ.

೩. **ಇಕ್ಕಟ್ಟಾದ ಮತ್ತು ವ್ಯವಸ್ಥಿತವಾಗಿರದ ರಸ್ತೆಗಳು :** ಕೊಳಚೆ ಪ್ರದೇಶಗಳಲ್ಲಿ ರಸ್ತೆಗಳು ವ್ಯವಸ್ಥಿತವಾಗಿ ನಿರ್ಮಾಣ ಮಾಡಿರುವುದಿಲ್ಲ. ಹೀಗಾಗಿ ರಸ್ತೆಯೆನಿಸಿಕೊಂಡಿರುವಂತಹ ದಾರಿಯಲ್ಲಿ ಕಸದ ರಾಶಿ ಬಿದ್ದಿರುತ್ತದೆ. ಚಿಕ್ಕಮಕ್ಕಳ ಮಲಮೂತ್ರ ವಿಸರ್ಜನೆಯ ತಾಣವಾಗಿರುತ್ತದೆ. ಬಟ್ಟೆ, ಪಾತ್ರೆ ತೊಳೆದ ನೀರು ನೇರವಾಗಿ ರಸ್ತೆಯ ಮೇಲೆಯೇ ಹರಿದು ಹೋಗುತ್ತಿರುತ್ತದೆ. ರಸ್ತೆಗಳನ್ನು ಸರಿಯಾದ ರೀತಿಯಲ್ಲಿ ನಿರ್ಮಾಣ ಮಾಡದೆ ಇರುವುದರಿಂದ ಬಹು ಬೇಗನೆ ತಮ್ಮ ಮೊದಲ ಅಸ್ತಿತ್ವಕ್ಕೆ ಬಂದು ಬಿಡುತ್ತವೆ. ರಸ್ತೆಗಳಲ್ಲಿ ತಗ್ಗುಗಳು ನಿರ್ಮಾಣವಾಗಿ, ಓಡಾಡಲು ಕೂಡ ಅಡೆ ತಡೆಯನ್ನುಂಟು ಮಾಡಿ ರಸ್ತೆಯ ರೂಪುರೇಷೆಗಳನ್ನೇ ಬದಲಿಸುತ್ತವೆ. ಇಂತಹ ಇಕ್ಕಟ್ಟಾದ ವ್ಯವಸ್ಥಿತವಾಗಿರದ ರಸ್ತೆಗಳು ಈ ಪ್ರದೇಶಗಳ ಲಕ್ಷಣವಾಗಿದೆ.

೪. **ನೀರಿನ ಕೊರತೆ :** ಮಾನವನ ದಿನನಿತ್ಯದ ಕೆಲಸ ಕಾರ್ಯಗಳಿಗೆ ಅತ್ಯವಶ್ಯಕವಾಗಿ ಬೇಕಾಗಿರುವುದು ನೀರು. ಪ್ರತಿನಿತ್ಯದ ಕಾರ್ಯಗಳು ನೀರಿನಿಂದ ಪ್ರಾರಂಭವಾಗಿ ನೀರಿನಿಂದಲೇ ಕೊನೆಗೊಳ್ಳುತ್ತದೆ.

ಒಬ್ಬ ವ್ಯಕ್ತಿಯಾಗಲಿ ಅಥವಾ ಪ್ರಾಣಿ, ಪಕ್ಷಿಯಾಗಲಿ ಆಹಾರ ಸೇವಿಸದೇ ಇರಬಹುದು. ಆದರೆ ನೀರು ಕುಡಿಯದೇ ಒಂದು ದಿನವೂ ಇರುವುದು ಅಸಾಧ್ಯ. ಹೀಗಾಗಿ "ನೀರು ಸಕಲ ಜೀವಿಗಳ ಸಂಜೀವಿನಿಯಾಗಿದೆ." ಆದರೆ ಈ ನೀರಿನ ಕೊರತೆಯಿಂದಾಗಿ, ಚಿಕ್ಕ ಸಮಸ್ಯೆಯು ದೊಡ್ಡ ಕಲಹಗಳಿಗೆ, ಮುಷ್ಕರಗಳಿಗೆ ಪ್ರತಿಭಟನೆಗಳಿಗೆ ದಾರಿ ಮಾಡಿಕೊಡುತ್ತದೆ. ವ್ಯವಸ್ಥಿತವಾಗಿರುವಂತಹ ಬಡಾವಣೆಗಳಲ್ಲಿ ನೀರಿನ ಕೊರತೆ ಉಂಟಾದರೆ ಶೀಘ್ರವಾಗಿ ನೀರನ್ನು ಒದಗಿಸುವ ಸೌಲಭ್ಯ ಮಾಡುತ್ತಾರೆ. ಆದರೆ ಕೊಳಚೆ ಪ್ರದೇಶಗಳಿಗೆ ನೀರಿನ ಕೊರತೆಯಾದಾಗ ಯಾವುದೇ ರೀತಿಯ ಪ್ರತಿಕ್ರಿಯೆ ದೊರೆಯುವುದಿಲ್ಲ. ನೀರಿನ ಕೊರತೆಯೂ ಕೂಡ ಈ ಪ್ರದೇಶಗಳ ದೊಡ್ಡ ಸಮಸ್ಯೆಯಾಗಿದೆ.

೫. **ನೈರ್ಮಲ್ಯದ ಕೊರತೆ ಮತ್ತು ರೋಗರುಜಿನಗಳ ತಾಣ :** ಕೊಳಚೆ ಪ್ರದೇಶಗಳಲ್ಲಿ ನೀರಿನ ಸಮಸ್ಯೆ ಇರುವಂತೆಯೇ ನೈರ್ಮಲ್ಯದ ಕೊರತೆಯಿರುವುದು ಕಂಡುಬರುತ್ತದೆ. ವ್ಯವಸ್ಥಿತವಾದ ಒಳಚರಂಡಿ ವ್ಯವಸ್ಥೆ ಇಲ್ಲದಿರುವುದು, ಉಳಿದಂತಹ ಕೆಲಸಗಳಿಗಾಗಿ ಉಪಯೋಗಿಸಿ ಬಿಟ್ಟಂತಹ ಮಲಿನ ನೀರು ಒಂದೆಡೆ ಶೇಖರಗೊಳ್ಳದೆ ರಸ್ತೆಯ ಮೇಲೆಲ್ಲಾ ಹರಡಿಕೊಂಡಿರುತ್ತದೆ. ಇಂತಹ ನೀರು ಅನೇಕ ರೋಗಗಳನ್ನು ತರುವಂತಹ ಕ್ರಿಮಿಗಳಿಗೆ ಆಶ್ರಯತಾಣವಾಗಿ, ಒಬ್ಬರಿಂದ ಒಬ್ಬರಿಗೆ ಹರಡುತ್ತದೆ. ಅದೇ ರೀತಿಯಾಗಿ ಸಾಮೂಹಿಕವಾದ ಶೌಚಾಲಯಗಳ ಕೊರತೆಯಿಂದಾಗಿ ಕಕ್ಕಸು ಮಾಡಲು ಯೋಗ್ಯವಾದ ಸ್ಥಳಗಳಿಲ್ಲದಿರುವುದರಿಂದ ಚಿಕ್ಕಚಿಕ್ಕ ಮಕ್ಕಳನ್ನು ಮನೆಯ ಮುಂದೆ ಕೂಡಿಸಿ, ಅಲ್ಲಿರುವ ಅಲ್ಪ ಸ್ವಲ್ಪ ನೈರ್ಮಲ್ಯವನ್ನು ಮತ್ತಷ್ಟು ಹದಗೆಡಿಸುವ ವಾತಾವರಣ ಈ ಪ್ರದೇಶಗಳಲ್ಲಿ ನಿರ್ಮಾಣವಾಗಿರುತ್ತದೆ.

೬. **ಆರ್ಥಿಕತೆಯ ಕೊರತೆ :** ಈ ಪ್ರದೇಶದಲ್ಲಿ ಹೆಚ್ಚಿನ ಜನರು ಅಸಂಘಟಿತ ವಲಯದ ದುಡಿಮೆಗಳೆನಿಸಿದ ಕಟ್ಟಡ ನಿರ್ಮಾಣ, ತರಕಾರಿ ಮಾರಾಟ, ಗೃಹಕೈಗಾರಿಕೆಗಳ ದುಡಿಮೆ, ಕಲ್ಲು ಕಟೆಯುವುದು, ಬಣ್ಣ ಬಳಿಯುವ ಕೆಲಸಗಳಲ್ಲಿ ದುಡಿಮೆ ಮಾಡುತ್ತಾರೆ. ಈ ದುಡಿಮೆಗಳೆಲ್ಲ ಸಾಮಾನ್ಯವಾಗಿ ಕಡಿಮೆ ಆದಾಯ ತರುವಂತಹ ದುಡಿಮೆಗಳಾಗಿರುತ್ತವೆ. ಅವರ ಕಡಿಮೆ ಆದಾಯದಿಂದ ಆರ್ಥಿಕ ಮಟ್ಟವು ಅತಿಕಡಿಮೆಯಾಗಿರುತ್ತದೆ. ಮಹಿಳೆ ಮತ್ತು ಪುರುಷ ಇಬ್ಬರೂ ಶ್ರಮವಹಿಸಿ ದುಡಿಮೆ ಮಾಡಿದರೂ ಕೂಡ ಅವರ ಆರ್ಥಿಕಮಟ್ಟವು ದುರ್ಬಲವಾಗಿರುತ್ತದೆ. ಈ ಪ್ರದೇಶದಲ್ಲಿ ವಾಸಿಸುವವರೆಲ್ಲರು ಹಿಂದುಳಿದ ವರ್ಗಕ್ಕೆ ಸೇರಿದವರಾಗಿರುವುದರಿಂದ ಅವರು ಹಿರಿಯರಿಂದ ಆಸ್ತಿಯನ್ನು ಪಡೆದಿರುವುದಿಲ್ಲ. ಹೀಗಾಗಿ ಇವರ ಆರ್ಥಿಕಮಟ್ಟವು ದುರ್ಬಲವಾಗಿದೆ.

೭. **ನೈತಿಕತೆ ಮತ್ತು ಶೈಕ್ಷಣಿಕ ಅರಿವಿನ ಕೊರತೆ :** ಈ ಪ್ರದೇಶದಲ್ಲಿ ವಾಸಿಸುವ ಜನರು ಮಾತ್ರ ಶಿಕ್ಷಿತರಾಗಿರುತ್ತಾರೆ. ಕೆಲವೊಂದು ನಗರಗಳಲ್ಲಿ (ಕೊಳಚೆ ಪ್ರದೇಶಗಳಲ್ಲಿ) ವಿದ್ಯಾವಂತ ಯುವಕ/ತಿಯರನ್ನು ಕಾಣುತ್ತೇವೆ. ಇವರಿಗೆ ಶಿಕ್ಷಣವನ್ನು ಮುಂದುವರೆಸಲು ಹಣಕಾಸಿನ ಕೊರತೆಯಿರುವುದರಿಂದ ಅರ್ಧದಲ್ಲೇ ಶಿಕ್ಷಣವನ್ನು ನಿಲ್ಲಿಸಿಬಿಟ್ಟಿರುತ್ತಾರೆ. ಅವಿದ್ಯಾವಂತರಾಗಿರುವವರು ತಮಗೆ ತಿಳಿದಿದ್ದೇ ದಾರಿ ಎನ್ನುವ ಅಭಿಪ್ರಾಯ ಹೊಂದಿರುತ್ತಾರೆ. ಅವರು ತಪ್ಪು ಮಾಡಿದಾಗ,

ತಪ್ಪು ದಾರಿ ಹಿಡಿದಾಗ ಅವರನ್ನು ತಿದ್ದಿ ಬುದ್ಧಿ ಹೇಳುವವರ ಕೊರತೆ ಕಂಡುಬರುತ್ತದೆ. ಒಂದು ವೇಳೆ ಅವರಿಗೆ ಬುದ್ಧಿಮಾತು ಹೇಳಿದರು ಕೇಳುವ ವ್ಯವದಾನವಿರುವುದಿಲ್ಲ. ಅವರಲ್ಲಿ ನೈತಿಕ ಮೌಲ್ಯಗಳಾದ ಸೌಜನ್ಯವಾಗಲಿ, ಶಿಷ್ಟಾಚಾರಗಳಾಗಲೀ ಕಂಡುಬರುವುದಿಲ್ಲ. ಬದಲಿಗೆ ಕಠಿಣತೆ, ಅಪರಾಧ ಮನೋಭಾವ, ಕೆಟ್ಟ ಚಟುವಟಿಕೆಗಳಾದ ಕಳ್ಳತನ, ಕಳ್ಳಸಾಗಣಿಕೆ, ದರೋಡೆ ಈ ಎಲ್ಲ ಚಟುವಟಿಕೆಗಳಲ್ಲಿ ಭಾಗಿಯಾಗಿರುವ ಮನೋಭಾವ ಕಂಡುಬರುತ್ತದೆ. ಈ ರೀತಿಯಾಗಿ ಆಗಲು ಬಹುಮುಖ್ಯವಾದ ಕಾರಣವೆಂದರೆ ಅವರ ಸಾಮಾಜಿಕ ವ್ಯವಸ್ಥೆಯಲ್ಲಿ ಸಂಸ್ಕಾರದ ಕೊರತೆಯಿರುವುದೇ ಆಗಿದೆ.

೮. **ಸಾಮಾಜಿಕ ಪ್ರತ್ಯೇಕತೆ :** ಈ ಪ್ರದೇಶದಲ್ಲಿ ವಾಸ ಮಾಡುವ ಜನರು ನಗರಗಳಿಂದ ಪ್ರತ್ಯೇಕವಾಗಿರುವಂತಹ ಪ್ರದೇಶದಲ್ಲಿ ವಾಸಿಸುತ್ತಿರುತ್ತಾರೆ. ತಮ್ಮ ಪ್ರದೇಶದ ಜನಗಳೊಂದಿಗೆ ಮಾತ್ರ ಬೆರೆಯುತ್ತಾರೆ. ನಗರ ಪ್ರದೇಶಗಳಿಂದ ಮತ್ತು ಅಲ್ಲಿ ವಾಸಿಸುವ ಜನರಿಂದ ದೂರವಿರುತ್ತಾರೆ. ಅವರೊಂದಿಗೆ ಯಾವುದೇ ರೀತಿಯ ವ್ಯವಹಾರಗಳು, ಮಾತುಕತೆಗಳು ಇರುವುದಿಲ್ಲ. ವರ್ಗ ಮತ್ತು ವರ್ಣದಿಂದ ಇವರು ದುರ್ಬಲರು ಮತ್ತು ಕೆಳವರ್ಗದವರಾಗಿರುವುದರಿಂದ ಅವರು ಸಮಾಜದ ಚಟುವಟಿಕೆಗಳಲ್ಲಿ ಹೆಚ್ಚಾಗಿ ಭಾಗವಹಿಸದೇ ಇರುವುದು ಸಾಮಾಜಿಕ ಪ್ರತ್ಯೇಕತೆಯನ್ನು ಬಿಂಬಿಸುತ್ತದೆ.

ಮೇಲೆ ತಿಳಿಸಿದ ಲಕ್ಷಣಗಳು ಕೊಳಚೆ ಪ್ರದೇಶಗಳ ಬಾಹ್ಯ ಲಕ್ಷಣಗಳ ಚಿತ್ರಣವಾದರೆ, ಇಲ್ಲಿ ವಾಸಿಸುವ ಮಹಿಳೆ, ವೃದ್ಧರ, ಮಕ್ಕಳ, ಮಾನಸಿಕ, ದೈಹಿಕ, ಶೈಕ್ಷಣಿಕ, ಸಾಮಾಜಿಕ, ಆರ್ಥಿಕ ಸಮಸ್ಯೆಗಳು ಆಂತರಿಕ ಲಕ್ಷಣಗಳ ಚಿತ್ರಣವಾಗಿವೆ.

## ೨.೨ ಕರ್ನಾಟಕ ಕೊಳಚೆ ಪ್ರದೇಶ ನಿರ್ಮೂಲನ ಮಂಡಳಿ ಮತ್ತು ಅದರ ಕಾರ್ಯ ಸ್ವರೂಪ

ಗುಲಬರ್ಗಾ ನಗರದಲ್ಲಿ ಕರ್ನಾಟಕ ಕೊಳಚೆ ಪ್ರದೇಶ ನಿರ್ಮೂಲನಾ ಮಂಡಳಿಯು ೧೯೭೫ರಲ್ಲಿ ಸ್ಥಾಪನೆಗೊಂಡಿತು. ಕೊಳಚೆ ನಿರ್ಮೂಲನ ಮತ್ತು ಕೊಳಚೆ ಪ್ರದೇಶವಾಸಿಗಳಿಗೆ ಪರ್ಯಾಯ ವಸತಿ ಕಲ್ಪಿಸಲು ರಾಜ್ಯ ಸರ್ಕಾರಗಳಿಗೆ ಹಣ ಸಹಾಯ ಮಾಡುವುದು ಈ ಮಂಡಳಿಯ ಉದ್ದೇಶ. ಇದರಲ್ಲಿ ಅಲ್ಪಾವಧಿ ಮತ್ತು ದೀರ್ಘಾವಧಿ ಯೋಜನೆಗಳನ್ನು ರೂಪಿಸಲಾಗಿದೆ. ಕೊಳಚೆ ಪ್ರದೇಶ ನಿರ್ಮೂಲನ ಮಂಡಳಿಗಳ ಮೂಲಕ ಕಾರ್ಮಿಕರಿಗೆ, ಬಡವರಿಗೆ, ಹಿಂದುಳಿದವರಿಗೆ ಮತ್ತು ಕೊಳಚೆ ನಿವಾಸಿಗಳಿಗೆ ವಸತಿ ಸೌಲಭ್ಯವನ್ನೊದಗಿಸಲಾಗುತ್ತಿದೆ. ಈ ಯೋಜನೆಗಾಗಿ ಕೇಂದ್ರ ಸರ್ಕಾರ, ರಾಜ್ಯ ಸರ್ಕಾರಗಳು, ಜೀವವಿಮಾ ನಿಗಮ, ವಾಣಿಜ್ಯ ಬ್ಯಾಂಕುಗಳು, ಗೃಹ ನಿರ್ಮಾಣ ಸಹಕಾರಿ ಸಂಘಗಳು ಹಣಕಾಸು ಒದಗಿಸುತ್ತವೆ.

ಡಾ.ಬಾಬಾಸಾಹೇಬ ಅಂಬೇಡ್ಕರ್ ಅವರ ಜನ್ಮಶತಾಬ್ದಿಯ ಅಂಗವಾಗಿ ರಾಷ್ಟ್ರದಾದ್ಯಂತ ಪರಿಶಿಷ್ಟ ಜಾತಿಯವರಿಗೆ ವಸತಿ ಯೋಜನೆಯನ್ನು ಜಾರಿಗೆ ತರಲಾಗಿದೆ. ಅದೇ ರೀತಿ ಇಂದಿರಾ ಆವಾಸ್ ಯೋಜನೆಯನ್ನು ಹಾಕಿಕೊಳ್ಳಲಾಗಿದೆ.

### ೨.೨.೧ ಪಂಚವಾರ್ಷಿಕ ಯೋಜನೆಗಳಲ್ಲಿ ಕೊಳಚೆ ಪ್ರದೇಶಗಳ ಅಭಿವೃದ್ಧಿ

ಮೊದಲನೆಯ ಪಂಚವಾರ್ಷಿಕ ಯೋಜನೆಯಲ್ಲಿ ೩೮೫ ಮಿಲಿಯನ್ ದಶಲಕ್ಷ ರೂಪಾಯಿಗಳನ್ನು ೧,೨೦,೦೦೦ ಮನೆಗಳ ನಿರ್ಮಾಣಕ್ಕೆ ಕಾದಿರಿಸಲಾಯಿತು. ಆಗಲೂ ಈ ಕೊಳಚೆ ಪ್ರದೇಶಗಳತ್ತ ಸರ್ಕಾರದ ಪೂರ್ಣ ಗಮನ ಹೋಗಲೇ ಇಲ್ಲ.

ಎರಡನೆಯ ಪಂಚವಾರ್ಷಿಕ ಯೋಜನೆಯ ವೇಳೆಗೆ ಸರ್ಕಾರ ತನ್ನ ದೀರ್ಘ ನಿದ್ದೆಯಿಂದ ಎಚ್ಚೆತ್ತು ಕೊಳಚೆ ಪ್ರದೇಶಗಳ ನಿರ್ಮೂಲನಕ್ಕಾಗಿ ೨೦೦ ಮಿಲಿಯನ್ ರೂಪಾಯಿಗಳನ್ನು ಕಾದಿರಿಸಿ, ಅದರಿಂದ ೧,೧೦,೦೦೦ ಮನೆಗಳನ್ನು ಕಟ್ಟುವ ಯೋಜನೆ ಹಾಕಿತು.

ಮೂರನೆಯ ಯೋಜನೆಯಲ್ಲಿ ಇದನ್ನು ಸ್ವಲ್ಪ ಮಟ್ಟಿಗೆ ತಿದ್ದುಪಡಿಗೊಳಿಸಿ, ಕೊಳಚೆ ಪ್ರದೇಶದ ನಿರ್ಮೂಲನಾ ಹಾಗೂ ಅಭಿವೃದ್ಧಿಗಾಗಿ ೪೦೦ ಮಿಲಿಯನ್ ರೂಪಾಯಿಗಳನ್ನು ಭಾರತ ಸರ್ಕಾರ ಮಂಜೂರು ಮಾಡಿತು. ಕೊಳಚೆ ಪ್ರದೇಶಗಳ ನಿರ್ಮೂಲನದ ಕಾರ್ಯಕ್ರಮಕ್ಕಾಗಿ ಬೊಂಬಾಯಿ, ಕಲ್ಕತ್ತಾ, ಮದ್ರಾಸ್, ದೆಹ್ಲಿ, ಕಾನ್ಪುರ, ಅಹಮದಾಬಾದ್ ಪಟ್ಟಣಗಳನ್ನು ಆರಿಸಿಕೊಂಡಿತು. ಈ ಯೋಜನೆಯ ಪ್ರಕಾರ ಕೇಂದ್ರ ಸರಕಾರವು ರಾಜ್ಯ ಸರಕಾರಗಳಿಗೆ ಧನ ಸಹಾಯ ಮಾಡುವುದೆಂದೂ, ಆ ಹಣವನ್ನು ರಾಜ್ಯ ಸರಕಾರಗಳು ಸ್ಥಳೀಯ ಸಂಸ್ಥೆ ಹಾಗೂ ನಗರ ಸಭೆಗಳಿಗೆ ಮಂಜೂರು ಮಾಡಿ, ಯೋಜನೆಯನ್ನು ಕಾರ್ಯಗತಗೊಳಿಸುವಂತೆಯೂ ಯೋಜಿಸಲಾಯಿತು. ಕೊಳಚೆ ಪ್ರದೇಶದ ಜನಗಳ ಪುನರ್ವಸತಿಗಾಗಿ ಧನಸಹಾಯ ನೀಡಬೇಕೆಂದು ನಿಗದಿ ಮಾಡಲಾಯಿತು.

ಪಂಡಿತ್ ನೆಹರೂರವರು ಹೇಳಿದರು : ಜನಗಳಲ್ಲಿ ಜಾಗೃತಿ ಮೂಡಬೇಕಾದರೆ ಮೊದಲು ಸ್ತ್ರೀಯನ್ನು ಜಾಗೃತಗೊಳಿಸಿರಿ ಒಮ್ಮೆ ಅವಳು ಜಾಗೃತಳಾದಳೆಂದರೆ ಅವಳಿಂದ ಅವಳ ಪರಿವಾರ, ಅನಂತರ ಊರು, ದೇಶ ಎಲ್ಲ ಜಾಗೃತವಾಗುತ್ತದೆ.

### ೨.೨.೨ ಕರ್ನಾಟಕ ಕೊಳಚೆ ಪ್ರದೇಶ ನಿರ್ಮೂಲನಾ ಮಂಡಳಿಯ ವತಿಯಿಂದ ಕೈಗೊಂಡಿರುವ ಯೋಜನೆಗಳು

ಕರ್ನಾಟಕ ಕೊಳಚೆ ಪ್ರದೇಶ ನಿರ್ಮೂಲನಾ ಮಂಡಳಿಯು ಗುಲಬರ್ಗಾ ನಗರದಲ್ಲಿ ಘೋಷಣೆ ಮಾಡಿದಂತಹ ಕೊಳಚೆ ಪ್ರದೇಶಗಳ ಅಭಿವೃದ್ಧಿಗಾಗಿ ಮಂಡಳಿಯ ವತಿಯಿಂದ ಪ್ರಮುಖವಾಗಿ ಐದು ಯೋಜನೆಗಳನ್ನು ಹಾಕಿಕೊಂಡಿದ್ದಾರೆ. ಅವುಗಳನ್ನು ಹೀಗೆ ವಿವರಿಸಲಾಗಿದೆ.

**1. SUDP:Slum upgradation Development Programme :** ಈ ಕಾರ್ಯಕ್ರಮದಡಿಯಲ್ಲಿ ಕೊಳಚೆ ಪ್ರದೇಶಗಳಲ್ಲಿ ರಸ್ತೆಯ ಸೌಲಭ್ಯಗಳನ್ನು ಮತ್ತು ಶೌಚಾಲಯಗಳಿಗೆ ಅನುಕೂಲಕರವಾದ ಡ್ರೈನೇಜ್‌ಗಳ ಸೌಲಭ್ಯಗಳನ್ನು ಮಾಡಿಕೊಡಲಾಗುತ್ತದೆ.

2. **NSDP : National slum Development Programme :** ರಾಷ್ಟ್ರೀಯ ಕೊಳಚೆ ಅಭಿವೃದ್ಧಿ ಕಾರ್ಯಕ್ರಮಗಳು. ಈ ಯೋಜನೆಯು ಕೊಳಚೆ ಪ್ರದೇಶವೆಂದು ಘೋಷಿಸಿರುವಂತಹ ಪ್ರದೇಶಗಳಿಗೆ ಅನುಕೂಲವಾಗಲು ಈಗ ಚಾಲ್ತಿಯಲ್ಲಿರುವಂತಹ ಸಿ.ಸಿ.ರಸ್ತೆ (ರೋಡ್)ಗಳನ್ನು ತಯಾರಿಸಲಾಗುತ್ತದೆ. ಮತ್ತು ಶೌಚಾಲಯಗಳಿಗಾಗಿ ಡ್ರೈನೇಜ್‌ಗಳನ್ನು ಕಟ್ಟಲಾಗುತ್ತದೆ.

3. **Vambay : Valmike Ambedakar Awas Yojana :** ಯೋಜನೆಯಡಿಯಲ್ಲಿ ಈ ಕೊಳಚೆ ಪ್ರದೇಶಗಳಲ್ಲಿ ವಾಸಿಸುವ ಜನರಿಗಾಗಿ ಸರಕಾರದವರು ಅವರಿಗಾಗಿ ವಾಲ್ಮೀಕಿ ಅಂಬೇಡ್ಕರ್ ವಸತಿ ಯೋಜನೆಯನ್ನು ಹಾಕಿಕೊಂಡಿದ್ದಾರೆ. ಈ ಯೋಜನೆಯು ರೂ.೪೦,೦೦೦ ಮೊತ್ತದಿಂದ ಕೂಡಿದ್ದು ೨೦,೦೦೦ ಸಾವಿರ ರೂಪಾಯಿಯನ್ನು ಸರಕಾರದವರು ಕಡಿತಗೊಳಿಸುತ್ತಾರೆ. ಉಳಿದ ೨೦,೦೦೦ ಸಾವಿರ ಮೊತ್ತವನ್ನು ಅವರು ಮನೆ ಕಟ್ಟಲು ತುಂಬಬೇಕಾಗುತ್ತದೆ. ಮನೆಯನ್ನು ಕಟ್ಟುವುದಕ್ಕಿಂತ ಮುಂಚೆ ೫,೧೦೦ ರೂ ಮೊತ್ತವನ್ನು ಖಾಯಂ ಮಾಡಿಕೊಳ್ಳಲು ಕೊಡಲಾಗುತ್ತದೆ. ಉಳಿದ ೧೫,೦೦೦ ಮೊತ್ತವನ್ನು ಮನೆಯ ಕಟ್ಟಡವನ್ನು ಪೂರ್ಣಗೊಳಿಸಿದ ಮೇಲೆ ಮತ್ತು ೨೦ ವರ್ಷಗಳ ಒಳಗೆ ಮೊತ್ತವನ್ನು ತುಂಬಬೇಕಾಗುತ್ತದೆ. ಒಂದು ವೇಳೆ ಈ ಮೊತ್ತವನ್ನು ೨೦ ವರ್ಷದ ಒಳಗೆ ತುಂಬದೇ ಇದ್ದರೆ ಅವರ ಮನೆಯ ಮಾಲಿಕತ್ವವನ್ನು ರದ್ದುಗೊಳಿಸಲಾಗುತ್ತದೆ. ಈ ಪ್ರದೇಶದಲ್ಲಿ ವಾಸಿಸುವ ಜನರಿಗೆ ಅನುಕೂಲವಾಗಲು ತಿಂಗಳಿಗೆ ೧೬೫ ರೂ.ಗಳಂತೆ ಮಾಸಿಕ ಶುಲ್ಕವನ್ನು ಪಾವತಿಸುವ ಅನುಕೂಲವನ್ನು ಮಾಡಿಕೊಡಲಾಗಿದೆ. ಹೆಚ್ಚಿನ ಆದಾಯವನ್ನು ತರುವವರಾಗಿದ್ದರೇ ಹೆಚ್ಚಿನ ಮಾಸಿಕ ಶುಲ್ಕವನ್ನು ಕಟ್ಟಬಹುದಾಗಿದೆ.

4. **NBA : Nirmala Bharat Abhiyana :** ನಿರ್ಮಲ ಭಾರತ ಅಭಿಯಾನ ಯೋಜನೆಯಡಿಯಲ್ಲಿ ಕೊಳಚೆ ಪ್ರದೇಶಗಳಲ್ಲಿ ನೈರ್ಮಲ್ಯವನ್ನು ಕಾಪಾಡಿಕೊಂಡು ಹೋಗಲು ಈ ಪ್ರದೇಶದ ಮಹಿಳೆಯರಿಗೆ ಮತ್ತು ಪುರುಷರಿಗೆ ಸಾಮೂಹಿಕ ಶೌಚಾಲಯಗಳನ್ನು ನಿರ್ಮಿಸಿಕೊಡಲಾಗುತ್ತದೆ.

5. **IHSDP : Integrated Housing slum development programme :** ಕೊಳಚೆ ಪ್ರದೇಶದ ಸಮಗ್ರ ವಸತಿಗಳ ಅಭಿವೃದ್ಧಿಯ ಯೋಜನೆಯ ಅಡಿಯಲ್ಲಿ ವಸತಿಗಳನ್ನು ನಿರ್ಮಾಣ ಮಾಡಿದ ನಂತರದಲ್ಲಿ ಯಾವುದಾದರು ಮನೆಯು ಬಿರುಕುಬಿಟ್ಟಿದ್ದರೆ ಅಥವಾ ಕಟ್ಟಡ ಸರಿಯಾಗಿ ಆಗದೇ ಇದ್ದಾಗ ಮನೆಗಳಿಗೆ ಪುನರ್ ನಿರ್ಮಾಣ ಮಾಡುವ ಕೆಲಸವನ್ನು ಈ ಯೋಜನೆಯ ಅಡಿಯಲ್ಲಿ ಕೈಗೊಳ್ಳಲಾಗುತ್ತದೆ.

### ೨.೨.೩ ಗುಲಬರ್ಗಾ ನಗರದ ಕೊಳಚೆ ಪ್ರದೇಶಗಳು

ಪ್ರಸ್ತುತ ಹೈದರಾಬಾದ್ ಕರ್ನಾಟಕದ ಪ್ರದೇಶವೆಂದು ಗುರುತಿಸಲ್ಪಡುವ ಕಲಬುರ್ಗಿ ಜಿಲ್ಲೆಯು ಉತ್ತರ ಭಾಗದಲ್ಲಿದ್ದು ವಿಶಾಲವಾದ ಸಮತಟ್ಟಾದ ಪ್ರದೇಶವನ್ನು ಹೊಂದಿದೆ. ಈ ಭೂ ಪ್ರದೇಶವು

೭೬°೦೪ ಮತ್ತು ೭೭°೪೨ ಡಿಗ್ರಿ ಪೂರ್ವ ರೇಖಾಂಶ ಹಾಗೂ ೧೬°೧೨ ಮತ್ತು ೧೭°೪೬ ಡಿಗ್ರಿ ಉತ್ತರ ಅಕ್ಷಾಂಶ ಇವುಗಳ ನಡುವೆ ಹರಡಿಕೊಂಡಿದೆ. ಜಿಲ್ಲೆಯ ವಾಯುವ್ಯ ಭಾಗದಲ್ಲಿ ಮಹಾರಾಷ್ಟ್ರ ರಾಜ್ಯದ ಸೊಲ್ಲಾಪುರ ಮತ್ತು ಉಸ್ಮಾನಾಬಾದ ಜಿಲ್ಲೆಗಳ ಗಡಿಯನ್ನು ಹೊಂದಿದೆ. ಪೂರ್ವಭಾಗದಲ್ಲಿ ಆಂಧ್ರಪ್ರದೇಶದ ಮೇಡಕ್ ಮತ್ತು ಮೆಹಬೂಬನಗರ ಜಿಲ್ಲೆಗಳ ಗಡಿಯನ್ನು ಹೊಂದಿವೆ. ಉತ್ತರದಲ್ಲಿ ಬೀದರ್, ದಕ್ಷಿಣದಲ್ಲಿ ರಾಯಚೂರು ಮತ್ತು ಪಶ್ಚಿಮದಲ್ಲಿ ಬಿಜಾಪುರ ಜಿಲ್ಲೆಗಳು ಕಲಬುರ್ಗಿಯ ಗಡಿ ಭಾಗಗಳಾಗಿವೆ. ಈ ಜಿಲ್ಲೆಯ ದಕ್ಷಿಣ ದಿಕ್ಕಿನಲ್ಲಿ ಹರಿಯುವ ಕೃಷ್ಣಾನದಿ, ಪಶ್ಚಿಮ ದಿಕ್ಕಿನಲ್ಲಿ ಹರಿಯುವ ಭೀಮಾನದಿಗಳು ಈ ಜಿಲ್ಲೆಗೆ ಕಲಬುರ್ಗಿ ಹಾಗೂ ಗುಲಬರ್ಗಾ ಎಂದು ಎರಡು ಹೆಸರುಗಳಿಂದ ಗುರುತಿಸಲಾಗುತ್ತದೆ. ಗುಲ್ಬರ್ಗಾ ಎಂಬ ಹೆಸರಿನ ಮೂಲದ ಬಗ್ಗೆ ಗ್ಯಾಜೆಟಿಯರ್‌ನಲ್ಲಿ ಈ ಕೆಳಗಿನಂತೆ ಉಲ್ಲೇಖವಾಗಿದೆ. ಕಲಬುರ್ಗಿ, ಗುಲ್ಬರ್ಗಾ ಎಂಬ ಪರ್ಯಾಯ ಹೆಸರುಗಳಿಂದ ಕರೆಯುವ ಈ ಪ್ರದೇಶದ ಚಾರಿತ್ರಿಕ ಉಲ್ಲೇಖವು ಕ್ರಿ.ಶ. ೧೨-೧೩ನೇ ಶತಮಾನದ ಜಿನಮಳ್ಳಿ ಶಿಲಾಶಾಸನದಲ್ಲಿ 'ಕಲಂಬರಿಗೆ' ಎಂದು ಕ್ರಿ.ಶ. ೧೫೯೭ರ ಬೇಲೂರು ಹಾಗೂ ಕ್ರಿ.ಶ. ೧೫೩೭ರ ಶಿರವಾಳದ ಶಿಲಾಶಾಸನಗಳಲ್ಲಿ "ಕಲುಬುರಗಿ" ಹಾಗೂ 'ಕಲಬುರಿಗೆ' ಎಂದು ದಾಖಲಾಗಿದೆ. ವಿಜಯನಗರಕ್ಕೆ ಬಂದಿದ್ದ ಪರ್ಶಿಯನ್ ರಾಯಭಾರಿ ರಝಾಕನು ಇದನ್ನು 'ಕಲಬರ್ಗ್' ಎಂದು ಹೇಳಿದ್ದಾನೆ. ಗುಲಬರ್ಗಾ ಎಂಬ ನಾಮಪದದ ನಿಷ್ಪತ್ತಿಗೆ ಸಂಬಂಧಿಸಿದಂತೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ. ಗುಲಬರ್ಗಾ ಎಂಬುದು ಹೆಚ್ಚು ಕಡಿಮೆ ಕಲಬುರಗಿ ಪದದ ಫಾರಸೀಕರಣವಾಗಿದ್ದು, ಫಾರಸಿಯಲ್ಲಿ 'ಗುಲ್' ಎಂದರೆ ಹೂವು 'ಬರ್ಗ್' ಎಂದರೆ ಎಲೆ ಎಂಬ ಅರ್ಥವಿದೆ. ಕಲಬುರಗಿ ಎಂಬ ಅಚ್ಚಕನ್ನಡ ರೂಪವೇ ಮಹಮ್ಮದೀಯರಿಗೆ ಮೊದಮೊದಲು 'ಕಲಬುರ್ಗ್' ಎಂದೆನಿಸಿ ಮುಂದೆ ಅದೇ 'ಗುಲಬರ್ಗಾ' ಎಂದಾದಂತೆ ತೋರುತ್ತದೆ. ಒಟ್ಟಿನಲ್ಲಿ 'ಕಲಬುರಗಿ' ಎಂಬ ಹೆಸರು ಕ್ರಿ.ಶ.೧೬ನೇ ಶತಮಾನದವರೆಗೂ ರೂಢಿಯಲ್ಲಿದ್ದು ಮುಸ್ಲಿಂರ ಆಡಳಿತ ಪ್ರಭಾವದಿಂದಾಗಿ 'ಗುಲಬರ್ಗಾ' ಎಂಬ ರೂಪವನ್ನು ಪಡೆದು ಪ್ರಚಲಿತದಲ್ಲಿ 'ಕಲಬುರ್ಗಿ' ಮತ್ತು 'ಗುಲಬರ್ಗಾ' ಎಂಬ ಹೆಸರನ್ನು ಉಳಿಸಿಕೊಂಡಿದೆ.

ಕೃಷ್ಣ, ಭೀಮ, ಮುಲ್ಲಾಮಾರಿ, ಕಾಗಿಣಾ, ಬೆಣ್ಣೆತೋರಾ, ಅಮರಜಾ, ಕಾರಂಜ ಎಂಬ ಸಪ್ತನದಿಗಳ ಬಿಡು ಎಂದು ಕಲಬುರ್ಗಿ ಜಿಲ್ಲೆಗೆ ಕರೆಯಲಾಗಿದೆ. ಕಲಬುರ್ಗಿ ಜಿಲ್ಲೆಯಲ್ಲಿ ಆಳಂದ, ಅಫಜಲಪೂರ, ಜೇವರ್ಗಿ, ಶಹಪೂರ, ಸುರಪುರ, ಯಾದಗಿರಿ, ಚಿತ್ತಾಪೂರ, ಸೇಡಂ ಮತ್ತು ಚಿಂಚೋಳಿ ತಾಲೂಕುಗಳನ್ನು ಒಳಗೊಂಡಿದೆ. ಈ ಜಿಲ್ಲೆಯ ಒಟ್ಟು ಭೌಗೋಳಿಕ ಪ್ರದೇಶವು ೧೯೯೧ರ ಜನಗಣತಿಯ ವರದಿಯಂತೆ ೧೬,೨೨೪ ಚ.ಕಿ.ಮೀ ಇದ್ದು ರಾಜ್ಯದ ಶೇ. ೮.೪೬ರಷ್ಟು ಪ್ರದೇಶವನ್ನು ಒಳಗೊಂಡಿದೆ. ವಿಸ್ತೀರ್ಣದಲ್ಲಿ ಕರ್ನಾಟಕ ರಾಜ್ಯದ ಎರಡನೆಯ ದೊಡ್ಡ ಜಿಲ್ಲೆಯಾಗಿದೆ. "ಜಿಲ್ಲೆಯ ಒಟ್ಟು ಜನಸಂಖ್ಯೆ ೩೧,೩೦,೯೨೨ (೨೦೦೧ರ ಜನಗಣತಿಯ ಪ್ರಕಾರ) ಇದರಲ್ಲಿ ೧.೫೯೨,೭೮೯, ಪುರುಷರು ಮತ್ತು ೧.೫೩೮,೧೩೩

ಮಹಿಳೆಯರನ್ನು ಹೊಂದಿದೆ. ಗ್ರಾಮೀಣ ಪ್ರದೇಶದ ಒಟ್ಟು ಜನಸಂಖ್ಯೆ ೨.೨೭೮,೩೦೧ ಇದರಲ್ಲಿ ೧.೧೫೨.೩೪೩ ಪುರುಷರು ಮತ್ತು ೧.೧೨೫.೯೫೮ ಮಹಿಳೆಯರನ್ನು ಹೊಂದಲಾಗಿದೆ. ೧೭.೯೬೧,೫೨೯ ನಗರ ಪ್ರದೇಶದ ಜನಸಂಖ್ಯೆಯನ್ನು ಹೊಂದಲಾಗಿದೆ. ಒಟ್ಟು ಪುರುಷರು ೮೫೨.೬೨೧ ಇದ್ದು ಮಹಿಳೆಯರು ೪೪೦.೪೪೬ ಸಂಖ್ಯೆಯಲ್ಲಿದ್ದಾರೆ. ಜಿಲ್ಲೆಯ ಒಟ್ಟು ಸಾಕ್ಷರತೆಯ ಪ್ರಮಾಣ ೫೦.೦ ಇದ್ದು ಇದರಲ್ಲಿ ಪುರುಷರ ಸಾಕ್ಷರತೆಯ ಪ್ರಮಾಣ ೬೧.೮ ಇದು ಮಹಿಳೆಯರ ಸಾಕ್ಷರತೆಯ ಪ್ರಮಾಣ ೩೭.೯ ಪ್ರಮಾಣವನ್ನು ಹೊಂದಿದ್ದಾರೆ."[೩]

ರಾಜ್ಯದಲ್ಲಿ ಗುಲಬರ್ಗಾ ಜಿಲ್ಲೆ ಅತಿ ಕಡಿಮೆ ಮಳೆಬೀಳುವ ಮತ್ತು ಹೆಚ್ಚು ಬಿಸಿಲಿನ ತಾಪ ಹೊಂದಿರುವ ಪ್ರದೇಶವಾಗಿದೆ. ರಾಜ್ಯದ ಒಟ್ಟು ನೀರಾವರಿ ಪ್ರದೇಶದ ಶೇ.೨,೧೧ ಹೆಕ್ಟೇರ ಜಮೀನು ಮಾತ್ರ ನೀರಾವರಿಗೆ ಒಳಪಟ್ಟಿದೆ. ಇಲ್ಲಿನ ಒಕ್ಕಲುತನ ಬಹುತೇಕ ಮಳೆಯನ್ನು ಅವಲಂಬಿಸಿರುವುದರಿಂದ ಮೇಲಿಂದ ಮೇಲೆ ಭೀಕರ ಬರಗಾಲಗಳಿಗೆ ತುತ್ತಾಗುತ್ತದೆ. ಈ ಪ್ರದೇಶವು ಕಪ್ಪು ಮಣ್ಣಿನಿಂದ ಕೂಡಿದ್ದು ಅತ್ಯಂತ ಫಲವತ್ತಾಗಿದೆ. ಇಲ್ಲಿ ಪ್ರಮುಖವಾಗಿ ತೊಗರಿಬೇಳೆ, ಜೋಳ, ಸಜ್ಜೆ, ಗೋಧಿ, ಎಳ್ಳು, ಸೂರ್ಯಕಾಂತಿ, ಹತ್ತಿ, ಕಡಲೆ ಮುಂತಾದ ಬೆಳೆಗಳನ್ನು ಬೆಳೆಯಲಾಗುತ್ತದೆ. ತೊಗರಿ ಬೆಳೆಯು ಈ ಭಾಗದ ಪ್ರಮುಖ ವಾಣಿಜ್ಯ ಬೆಳೆಯಾಗಿದ್ದು ಗುಲಬರ್ಗಾ ಜಿಲ್ಲೆಗೆ ತೊಗರಿಯ ಕಣಜವೆಂದು ಕರೆಯುತ್ತಾರೆ.

ಕೋಷ್ಟಕ ೧

ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ

ಗುಲಬರ್ಗಾ ಉಪ ವಿಭಾಗದ ವ್ಯಾಪ್ತಿಯಲ್ಲಿ ಬರುವ ಗುಲಬರ್ಗಾ ಜಿಲ್ಲೆ ಮತ್ತು ಬೀದರ ಜಿಲ್ಲೆಯ ಘೋಷಿತ ಪ್ರದೇಶಗಳ ವಿವರವಾದ ಪಟ್ಟಿ

| ಕ್ರ.ಸಂ. | ಕೊಳಚೆ ಪ್ರದೇಶದ ಹೆಸರು ಗುಲಬರ್ಗಾ ನಗರ | ಮಾಲೀಕತ್ವ | ವಿಸ್ತೀರ್ಣ ಎ-ಗು | ಗುಡಿಸಲು ಸಂಖ್ಯೆ | ಒಟ್ಟು ಜನ ಸಂಖ್ಯೆ | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಇತರ | ಗೇಜೇಟ್ ನೋಟಿಫಿಕೇಶನ್ ಸಂಖ್ಯೆ |
|---|---|---|---|---|---|---|---|---|---|
| ೧ | ೨ | ೩ | ೪ | ೫ | ೬ | ೭ | ೮ | ೯ | ೧೦ |
| ೦೧ | ಹಮಾಲವಾಡಿ ಕೊಪ್ರ ಗುಲ್ಬರ್ಗಾ | ಖಾಸಗಿ | ೦-೩೯ | ೮೨ | ೫೨೩ | ೦೫ | - | ೫೧೮ | ನಂ.ಹೆಚ್‌ಯುಡಿ:೯೮ ಎಂ.ಸಿಎಸ್:೭೯ (೧) ದಿ. ೫.೨.೧೯೮೧ |
| ೦೨. | ಆರ್ಯನಗರ | ಸರ್ಕಾರಿ | ೨-೦೦ | ೧೧೫ | ೮೨೫ | ೭೦೦ | ೧೨೫ | - | ನಂ.ಹೆಚ್‌ಎಂಎ:೧೮೯:ಎಂಎಸ್‌ಐ:೭೫ ದಿ. ೨೯.೮.೧೯೭೫ |
| ೦೩. | ಜೋಶಿವಾಡಾ (ಬಂಬು ಬಜಾರ) | ಸರ್ಕಾರಿ | ೦-೧೮ | ೮೮ | ೫೫೬ | - | ೨೫೬ | ೩೦೦ | ನಂ. ಹೆಚ್‌ಎಂಎ:೨೭೭:ಎಂಎಸ್‌ಐ:೭೪ ದಿ. ೧೭.೦೧.೧೯೭೫ |
| ೦೪. | ಬ್ರಹ್ಮಪೂರ ವಡ್ಡರವಾಡಾ | ಸರ್ಕಾರಿ | ೨-೨೧ | ೧೩೯ | ೭೭೯ | ೪೭೯ | ೧೦೦ | ೨೦೦ | ನಂ.ಹೆಚ್‌ಯುಡಿ:೪೯:ಎಂಸಿಎಸ್:೯೫ ದಿ. ೧೭.೪.೧೯೮೬ |
| ೦೫. | ಬುದ್ಧನಗರ | ಸರ್ಕಾರಿ | ೧-೨೬ | ೭೫ | ೪೪೪ | ೩೫೦ | ೫೪ | ೪೦ | ನಂ. ಹೆಚ್‌ಎಂಎ:೧೮೯:ಎಂಎಸ್‌ಐ:೭೫ ದಿ. ೨೯.೮.೧೯೭೫ |
| ೦೬. | ಗಾಜೀಪೂರಾ | ಸರ್ಕಾರಿ | ೪-೦೦ | ೧೨೩ | ೬೩೭ | ೫೦೦ | ೩೭ | ೧೦೦ | ನಂ. ಹೆಚ್‌ಎಂಎ:೨೨೭:ಎಂಎಸ್‌ಐ:೭೪ ದಿ. ೧೭.೦೧.೧೯೭೫ |
| ೦೭. | ಹನುಮಾನ್‌ನಗರ ಭಾಗ ೧ | ಖಾಸಗಿ | ೧-೧೩ | ೯೨ | ೪೮೧ | ೨೫೦ | ೨೧೦ | ೨೧ | ನಂ. ೪೯:ಎಂಸಿಎಸ್:೮೫ ದಿ. ೧೭.೪.೧೯೮೬ |
| ೦೮. | ಹನುಮಾನ್‌ನಗರ ಭಾಗ ೨ | ಖಾಸಗಿ | ೩-೦೫ | ೨೬೪ | ೧೬೩೫ | ೧೦೫೦ | ೩೩೦ | ೨೫೫ | ನಂ.೪೯:ಎಂಸಿಎಸ್:೮೫ ದಿ. ೧೭.೪.೧೯೮೬ |
| ೦೯. | ಇಂದಿರಾನಗರ | ಖಾಸಗಿ | ೬-೦೯ | ೩೮೦ | ೨೦೩೧ | ೧೭೦೦ | ೧೫೦ | ೧೮೧ | ನಂ. ಹೆಚ್‌ಯುಡಿ:೪೯:ಎಂಸಿಎಸ್:೮೫ ದಿ. ೧೭.೪.೧೯೮೬ |
| ೧೦. | ಕುಂಚಿಕೊರವರ ಓಣಿ | ಖಾಸಗಿ | ೧-೧೧ | ೬೭ | ೪೭೬ | ೩೦ | ೭೫ | ೪೭೬ | ನಂ. ಹೆಚ್‌ಎಂಎ:೧೮೯:ಎಂಎಸ್‌ಐ:೭೫ ದಿ. ೨೯.೮.೧೯೭೫ |

| | | | | | | | | |
|---|---|---|---|---|---|---|---|---|
| ೧೧. ಲಂಬಾಣಿ ತಾಂಡಾ | ಸರ್ಕಾರಿ | ೨-೨೦ | ೧೨೨ | ೭೪೮ | ೭೪೮ | - | - | ನಂ. ಹೆಚ್‌ಎಂಎ:೧೮೯:ಎಂಎನ್‌ಐ:೭೫ ದಿ. |
| ೧೨. ಮಾಂಗರವಾಡಿ | ಸರ್ಕಾರಿ | ೩-೦೦ | ೫೫ | ೩೬೨ | ೩೬೨ | - | - | ನಂ. ಹೆಚ್‌ಎಂಎ:೧೮೯:ಎಂಎನ್‌ಐ:೭೫ ದಿ. ೨೯.೮.೧೯೭೫ |
| ೧೩. ಮುನ್ಸಿಪಲ್ ಲೇಬಲ್ ಕಾಲೋನಿ | ಸರ್ಕಾರಿ | ೪-೦೯ | ೧೭೧ | ೮೮೨ | ೬೦೦ | ೨೦೦ | ೧೮೨ | ನಂ.ಹೆಚ್‌ಎಂಎ:೧೮೯:ಎಂಎನ್‌ಐ:೭೫ ದಿ. ೨೯.೮.೧೯೭೫ |
| ೧೪. ರಾಂಜೀನಗರ | ಸರ್ಕಾರಿ | ೩-೧೨ | ೧೫೬ | ೯೫೯ | ೬೫೯ | - | ೩೦೦ | ನಂ. ೧೨೫:ಎಂಯುಎನ್:೯೩:೩೫೭೯ ದಿ. ೧೫.೯.೧೯೯೫ |
| ೧೫. ಸಂಜಯಗಾಂಧಿನಗರ | ಸರ್ಕಾರಿ | ೧೦-೦೦ | ೨೯೬ | ೧೮೮೦ | ೨೦೦ | ೨೮೦ | ೧೪೦೦ | ನಂ. ೧೨೦:ಎಂಯುಜಿ:೧೮೮:೩೬೫೭ ದಿ. ೨೯.೮.೧೯೭೫ |
| ೧೬. ಸಂಜೀವನಗರ | ಸರ್ಕಾರಿ | ೫-೧೦ | ೩೩೪ | ೨೦೩೪ | ೧೬೮೦ | ೫೦ | ೩೧೩ | ನಂ. ಹೆಚ್‌ಎಂಎ:೧೮೯:ಎಂಎನ್‌ಐ:೭೫ ದಿ. ೨೯.೧೦.೧೯೮೯ |
| ೧೭. ಶಹಬಜಾರ ಹರಿಜನವಾಡಾ | ಸರ್ಕಾರಿ | ೧-೦೮ | ೯೧ | ೪೭೨ | ೪೭೨ | - | - | ನಂ. ಹೆಚ್‌ಎಂಎ:೨೭:ಎಂಎನ್‌ಐ:೭೪ ದಿ. ೧೭.೦೧.೧೯೭೫ |
| ೧೮. ತಾರಫೈಲ್ | ಖಾಸಗಿ | ೭-೩೦ | ೫೧೮ | ೨೯೦೫ | ೨೨೦೦ | ೫೦೫ | ೨೦೦ | ನಂ. ಹೆಚ್‌ಎಂಎ:೨೨೭:ಎಂಎನ್‌ಐ:೭೪ ದಿ. ೧೭.೦೧.೧೯೭೫ |
| ೧೯. ಬಾಪುನಗರ | ಸರ್ಕಾರಿ | ೬-೨೦ | ೮೯ | ೬೦೧ | ೫೦೦ | ೧೦೧ | - | ನಂ. ೯೬:ಎಂಯುಎನ್:೯೯ ದಿ. ೧೮.೯.೨೦೦ |
| ೨೦. ಜೈ ಭೀಮನಗರ | ಜೆಡಿಎ | ೦-೧೧ | ೫೩ | ೪೮೦ | ೪೮೦ | - | - | ನಂ. ೭೪:ಎಂಯುಎನ್:೯೯:೦೦:೪೨೬೫ ದಿ. ೧೮ ೯ ೨೦೦೧ |
| ೨೧. ಶಹಬಜಾರ ತಾಂಡಾ | ಸರ್ಕಾರಿ | ೧೨-೦೦ | ೨೬೪ | ೧೯೫೩ | ೧೬೦೦ | ೫೩ | ೩೦೦ | ನಂ. ೯೩:ಎಂಯುಎನ್:೯೯:೦೦ ದಿ. ೧೮.೯.೨೦೦೨ |
| ೨೨. ಸುನೀಲ್ ನಗರ | ಸರ್ಕಾರಿ | ೦೦-೨೪ | ೪೬ | ೨೦೦ | ೨೦೦ | - | - | ನಂ. ೪೬:ಎಂಯುಎನ್:೨೦೦೧:೪೯೧ ದಿ. ೫.೬.೨೦೦೨ |
| ೨೩. ಬುದ್ಧ ನಗರ (ದಕ್ಷಿಣ) | ಸಿಸಿಜಿ | ೧-೧೪ | ೮೦ | ೪೪೭ | ೪೪೭ | - | - | ನಂ. ೮೩:ಎಂಯುಎನ್:೨೦೦೧:೪೯೦ ದಿ. ೫.೬.೨೦೦೨ |
| ೨೪. ಶಾಮಸುಂದರ ನಗರ | - | ೧-೮೦ | ೪೪ | ೨೪೭ | ೨೪೭ | - | - | ನಂ. ೮೧:ಎಂಯುಎನ್:೨೦೦೧:೪೯೫ ದಿ. ೫.೬.೨೦೦೨ |
| ೨೫. ಗಾಂಧಿ ಲೆಪ್ರಸಿ ಕಾಲೋನಿ | ಸಿಸಿಜಿ | ೨-೩೪ | ೮೭ | ೩೦೮ | ೧೫೦ | ೫೦ | ೧೦೮ | ನಂ. ೮೫:ಎಂಯುಎನ್:೨೦೦೧:೪೯೯ ದಿ. ೬.೬.೨೦೦೨ |
| ೨೬. ಗಂಗಾನಗರ ಸಿಸಿಜಿ | | ೧೩-೦೦ | ೧೮೪ | ೮೬೪ | ೨೦೦ | ೧೦೦ | ೫೬೪ | ನಂ. ೮೪:ಎಂಯುಎನ್:೨೦೦೧:೪೯೮ ದಿ. ೬.೬-೨೦೦೨ |
| ೨೭. ಹೀರಾಪೂರ | ಸಿಸಿಜಿ | ೧೬-೨೦ | ೨೫೦ | ೧೨೯೨ | ೧೨೯೨ | - | - | ನಂ. ೭೮:ಎಂಯುಎನ್:೨೦೦೧:೪೯೨ ದಿ. ೫.೬.೨೦೦೨ |

| | | | | | | | | | |
|---|---|---|---|---|---|---|---|---|---|
| ೨೮. | ಬೋರಾಬಾಯಿನಗರ | ಸಿಸಿಜಿ | ೭-೧೫ | ೨೨೭ | ೧೭೧೩ | ೮೫ | ೫೦ | ೧೫೭೮ | ನಂ. ೮೭:ಎಂಯುಎನ್:೨೦೦೧:೫೦೦ ದಿ. ೬.೬.೨೦೦೨ |
| ೨೯. | ವಿಜಯನಗರ | ಸಿಸಿಜಿ | ೫- ೩೨ | ೨೧೩ | ೧೦೬೫ | ೨೧೫ | ೮೫೦ | - | ನಂ. ೮೦:ಎಂಯುಎನ್:೨೦೦೧:೪೯೪ ದಿ. ೫.೬.೨೦೦೨ |
| ೩೦ | ಅಂಬಿಕಾನಗರ | ಸಿಸಿಜಿ | ೭-೩೧ | ೧೨೫ | ೭೭೦ | ೧೫೪ | ೭೭ | ೫೩೯ | ನಂ. ೮೨:ಎಂಯುಎನ್:೨೦೦೧:೪೯೬ ದಿ. ೫.೬.೨೦೦೨ |
| ೩೧ | ಜಿಲಾನಾಬಾದ | ಸಿಸಿಜಿ | ೨೮-೦೦ | ೨೯೫ | ೨೦೩೭ | ೨೦೩೭ | - | - | ನಂ. ೭೯:ಎಂಯುಎನ್:೨೦೦೧:೪೯೩ ದಿ. ೬.೬.೨೦೦೨ |
| ೩೨. | ಕೀರ್ತಿನಗರ (ಕೃಷ್ಣಾನಗರ) | ಸರ್ಕಾರಿ | ೩-೨೦ | ೧೩೩ | ೮೨೧ | ೬೧೫ | ೧೦೬ | ೧೦೦ | ನಂ. ೪೨:ಎಂಯುಎನ್:೯೯:೪೯೦ ದಿ. ೫.೬.೨೦೦೨ |
| ೩೩. | ಸೈಯದಗಲ್ಲಿ | ಸಿಸಿಜಿ | ೫-೩೨ | ೧೫೭ | ೧೦೩೬ | ೧೦೩ | ೯೩೩ | - | ನಂ. ೮೮:ಎಂಯುಎನ್:೨೦೦೧:೫೦೧ ದಿ. ೬.೬.೨೦೦೨ |
| ೩೪. | ರಾಜೀವಗಾಂಧಿನಗರ | ಸರ್ಕಾರಿ | ೧೩-೨೫ | ೫೨೯ | ೨೯೨೩ | ೮೦೦ | ೫೦ | ೨೦೭೩ | ನಂ.ಪುರಸಭೆ ಇತರೆ೨.೦೩.೦೪ : ೩೪೦೯ ದಿ. ೨೭.೧೦.೦೩ |
| ೩೫. | ಖಾನಾಪೂರ | ಸಿಸಿಜಿ | ೫-೧೦ | ೧೬೨ | ೧೦೯೫ | ೫೯೫ | ೫೦೦ | - | ನಂ. ಪುರಸಭೆ ಇತರೆ ೨.೦೩.೦೪ : ೩೪೧೦ ದಿ. ೨೭.೧೦.೦೩ |
| ೩೬. | ಬಸವನಗರ | | ೧೮-೨೦ | ೩೭೫ | ೨೦೫೭ | ೨೦೫೭ | - | - | ನಂ. ಪುರಸಭೆ ಇತರೆ ೨.೦೩.೦೪ : ೩೪೦೮ ದಿ. ೨೭.೧೦.೦೩ |
| ೩೭. | ಹನುಮಾನ್ ತಾಂಡಾ | | ೭-೦೨ | ೧೦೦ | ೬೧೮ | ೬೧೮ | - | - | ನಂ. ಪುರಸಭೆ ಇತರೆ ೨.೦೩.೦೪ : ೩೪೦೭ ದಿ. ೨೭.೧೦.೩೮ |
| ೩೮. | ನಾಗನಹಳ್ಳಿ ಹರಿಜನಾವಾಡಾ | | ೩-೨೫ | ೬೧ | ೩೦೦ | ೩೦೦ | - | - | |
| ೩೯. | ತಾರಫೈಲ (ಪೂರ್ವ) | ಸಿಸಿಜಿ | ೧೭-೨೦ | ೪೯೩ | ೨೩೪೯ | ೨೧೧೫ | ೨೩೪ | - | |
| ೪೦. | ಕಪನೂರ ಹರಿಜನವಾಡಾ (ಪೂರ್ವಭಾಗ) | ಸಿಸಿಜಿ | ೬-೦೩ | ೧೫೨ | ೮೫೬ | ೮೫೬ | - | - | ನಂ. ಪುರಸಭೆ ಇತರೆ ೨.೦೩.೦೪ ೩೩೯೯ ದಿ ೨೪.೦೨.೨೦ |
| ೪೧. | ಕುಟುಂಬ ಕಲ್ಯಾಣ ನಗರ ಕಪನೂರ | | | | | | | | |
| ೪೨. | ವಿಧ್ಯಾನಗರ ಕಪನೂರ | | | | | | | | |
| ೪೩. | ಖಿರೇಷಿಗಲ್ಲಿ | | | | | | | | |
| ೪೪. | ಬಾರಾಸ್‌ಕಟ್ಟಾ | | | | | | | | |

| | | |
|---|---|---|
| ೪೫. | ಜಗಜೀವನರಾಂ ನಗರ ಕಪನೂರ | |
| ೪೬. | ಕ್ಯಾತೇಶ್ವರ ನಗರ | |
| ೪೭. | ರಾಜಾಪೂರ ವಿಲೇಜ್ | |
| ೪೮. | ಬೀಮನಗರ ಜಗತ್ | |
| ೪೯. | ಢೋರ್‌ಗಲ್ಲಿ ಜಗತ್ | |
| ೫೦. | ಗೊಲ್ಲರ ಕಾಲೋನಿ ಏರಿಯಾ ಜಗತ್ | |
| ೫೧. | ಲಕ್ಷ್ಮೀ ಟೆಂಪಲ್ ಏರಿಯಾ ಜಗತ್ | |
| ೫೨. | ಭವಾನಿ ನಗರ ವಾರ್ಡ್‌ನಂ. ೩ | |

## ೨.೨.೪ ಕೊಳಚೆ ಪ್ರದೇಶದ ಮಹಿಳಾ ಬದುಕು : ಒಂದು ಸ್ತ್ರೀವಾದಿ ವ್ಯಾಖ್ಯಾನ

ಹೆಣ್ಣು ಎಂದಾಕ್ಷಣ, ಕರುಣಾಮಯಿ, ವಾತ್ಸಲ್ಯಮಯಿ, ಸಹನಾಮಯಿಯಾಗಿ, ತ್ಯಾಗಮಯಿಯಾಗಿ ಹೀಗೆ ಇನ್ನು ಅನೇಕ ಗುಣ, ಸ್ವಭಾವಗಳಿರುವವಳು ಎಂಬುದಾಗಿ ಹೆಣ್ಣಿನ ಕುರಿತಾದ ಸಾಂಪ್ರದಾಯಿಕ ಚಿತ್ರಣ ಬಂದುಬಿಡುತ್ತದೆ. ಅದೇ ಗಂಡು ಎಂದಾಕ್ಷಣ ಶೂರನು, ಧೀರನು, ಸ್ವಾವಲಂಬಿಯು, ರಕ್ಷಣೆಯನ್ನು ಒದಗಿಸುವವನು ಎಂಬ ಚಿತ್ರಣ ನಮ್ಮ ಕಣ್ಣ ಮುಂದೆ ಬರುತ್ತದೆ. ಈ ಎರಡು ಲಿಂಗಗಳು ಜೈವಿಕ ಸೃಷ್ಟಿಯ ಕಾರಣಗಳಿಂದ ಭಿನ್ನವಾದರೂ, ಸಂವಿಧಾನದ ದೃಷ್ಟಿಯಲ್ಲಿ ಸಮಾನರು. ಆದರೆ ಇವರಿಬ್ಬರ ಮಧ್ಯೆ ಪುರುಷ ಪ್ರಧಾನ ವ್ಯವಸ್ಥೆ, ಜೈವಿಕ ಮತ್ತು ಮಾನಸಿಕ ಕಾರಣಗಳನ್ನು ಮುಂದು ಮಾಡಿ ಮಹಿಳೆಯನ್ನು ದುರ್ಬಲಳನ್ನಾಗಿ, ಪುರುಷನನ್ನು ಪ್ರಬಲನನ್ನಾಗಿಸಿದ್ದಾರೆ. ಪುರುಷನು ಶ್ರೇಷ್ಠನಾಗಿ ಮಹಿಳೆಯನ್ನು ಕನಿಷ್ಠಳನ್ನಾಗಿ ಮಾಡಲಾಗಿದೆ.

ಹೆಣ್ಣಿನ ಜೀವನದ ಹಿನ್ನೆಲೆ ತಿಳಿದುಕೊಳ್ಳಬೇಕಾದರೆ, ಇತಿಹಾಸದ ಪುಟಗಳನ್ನು ತಿರುವಿ ನೋಡಬೇಕು. ಆವಾಗ ಹೆಣ್ಣಿನ ನೈಜ ಸ್ಥಿತಿಯು ಗೋಚರವಾಗುತ್ತದೆ. ಇತಿಹಾಸದ ಪುಟಗಳಲ್ಲೆಲ್ಲ ಹೆಣ್ಣಿನ ಮೌನವೇ ಗೋಚರಿಸುತ್ತದೆ. ಒಬ್ಬ ರಾಜ ಇಷ್ಟೊಂದು ಯುದ್ಧಗಳನ್ನು ಮಾಡಿದನು. ತನ್ನ ರಾಜ್ಯವನ್ನು ಇಷ್ಟು ಪ್ರದೇಶಗಳಿಗೆ ವಿಸ್ತರಿಸಿಕೊಂಡನು. ಇಷ್ಟು ಜನ ರಾಣಿಯಂದಿರು ಇದ್ದರು, ಯುದ್ಧದಲ್ಲಿ ಬೆಲೆಬಾಳುವ ವಸ್ತುಗಳು ಧನ ಧಾನ್ಯಗಳು ಪ್ರದೇಶಗಳು ಪ್ರಾಣಿಗಳೊಂದಿಗೆ ಹೆಣ್ಣುಗಳನ್ನು ಗೆದ್ದನೆಂದು, ಇತಿಹಾಸದಲ್ಲಿ ಅವನ ಪರಾಕ್ರಮವನ್ನು ಕುರಿತೇ ಹೇಳಲಾಗಿದೆ. ಆದರೆ ಅದೇ ಹೆಣ್ಣಿನ ವಿಷಯಕ್ಕೆ ಬಂದಾಗ ಅಲ್ಲಿ ಮೌನವು ಎದ್ದು ತೋರುತ್ತದೆ. ಹೆಣ್ಣು ಕೂಡ ಯುದ್ಧದಲ್ಲಿ ಭಾಗಿಯಾಗಿದ್ದಳು, ಶಸ್ತ್ರಾಸ್ತ್ರ ವಿದ್ಯೆಗಳಲ್ಲಿ, ಕುದುರೆ ಸವಾರಿ ಮಾಡುವುದರಲ್ಲಿ ಪರಿಣಿತಳಾಗಿದ್ದಳು. ಯುದ್ಧಗಳಲ್ಲಿ ಗೆದ್ದು ಬಂದಿರುವ ಮತ್ತು ಮಹಿಳೆಯರು ಕೂಡ ಸಕಲಕಲಾವಲ್ಲಭೆಯರಾಗಿದ್ದರು ಎಂಬ ಅಂಶ ಇತಿಹಾಸದ ಕೆಲವೊಂದು ಪುಟಗಳಲ್ಲಿ ಮಾತ್ರ ನಮೂದಿಸಲಾಗಿದೆ.

ಇತಿಹಾಸದ ಪುಟಗಳಲ್ಲಿ ಮುದ್ರಿತವಾಗಿರುವ ಕೆಲವೇ ಕೆಲವು ಮಹಿಳೆಯರ ಸಾಹಸಗಾಥೆಯನ್ನು ಕುರಿತು ಸಂಪೂರ್ಣ ಚಿತ್ರಣ ದೊರೆಯುತ್ತದೆ. ಉಳಿದಂತಹ ಮಹಿಳೆಯರ ಪಾತ್ರ ಗೌಣವಾಗಿದೆ, ಮೌನವಾಗಿದೆ. ಯುದ್ಧದ ಸಂದರ್ಭದಲ್ಲಿ ಎಷ್ಟೊ ಜನ ವಿಧವೆಯರು, ಅವಿವಾಹಿತ ಮಹಿಳೆಯರು ತಮ್ಮ ಪ್ರಾಣವನ್ನು ಒತ್ತೆಯಿಟ್ಟು ಗುಪ್ತ ಸಂದೇಶವನ್ನು ರವಾನಿಸಿದವರು, ಯುದ್ಧದ ಸಂದರ್ಭದಲ್ಲಿ ತಂಗಿರುವಂತಹ ಸೈನಿಕರಿಗೆ, ರಾಜರುಗಳಿಗೆ ಊಟದ ವ್ಯವಸ್ಥೆಯನ್ನು ಮಾಡಿದಂತಹ ಮಹಿಳೆಯರು, ಪುರುಷರು ಮುಂದೆ ನಿಂತು ಯುದ್ಧ ಮಾಡಿದರೆ ಅವರ ಬೆನ್ನ ಹಿಂದೆ ಸ್ಫೂರ್ತಿಯ ಸೆಲೆಯನ್ನು, ಆತ್ಮವಿಶ್ವಾಸವನ್ನು ತುಂಬುತ್ತಿದ್ದ ಮಹಿಳೆಯರ ಪಾತ್ರ ಮಾತ್ರ ಕಾಣದಾಯಿತು. ಯುದ್ಧದಲ್ಲಿ ಮಡಿದ ಪುರುಷನಿಗೆ ವೀರಮರಣವನ್ನಪ್ಪಿದ ವೀರಯೋಧನೆಂದು ಹಾಡಿಹೊಗಳಿದರು. ಆದರೆ ಅವನಿಗೆ ಸ್ಫೂರ್ತಿಯನ್ನು, ಚೈತನ್ಯವನ್ನು ತುಂಬುತ್ತಿದ್ದ ಮಹಿಳೆಯರು ಮಾತ್ರ ಗೌಣವಾದರು, ಮೌನವಾದರು,

ಅವರ ಮೌನ ಮೌನವಾಗಿಯೇ ಉಳಿಯಿತು. ಅವರು ಪ್ರಧಾನಧಾರೆಗೆ ಬರದೇ ಅವರ ಸಾಹಸವನ್ನು ನಮ್ಮ ಪುರುಷ ಪ್ರಧಾನ ವ್ಯವಸ್ಥೆ ನಿರಾಕರಣೆ ಮಾಡಿತು. ಪುರುಷನ ಪರಾಕ್ರಮಗಳು ಹಾಡಿ ಹೊಗಳಿದರು. ಆದರೆ ಮಹಿಳೆಯರ ಪರಾಕ್ರಮಗಳನ್ನು ಹಾಡಿ ಹೊಗಳುವ ಮನಸ್ಸು ಮಾಡಲಿಲ್ಲ. ತಮ್ಮ ಪಾತ್ರಕ್ಕೆ ಧಕ್ಕೆಯುಂಟಾಗುತ್ತದೆ ಏನೋ ಎನ್ನುವ ಅಳುಕಿನಿಂದಾಗಿ ವ್ಯವಸ್ಥೆಯು ಈ ತಾರತಮ್ಯವನ್ನು ಮಾಡಿ, ಇತಿಹಾಸದ ಪುಟಗಳಲ್ಲಿ ಆಕೆಯ ಪರಾಕ್ರಮ, ಶೌರ್ಯಗಳು ನಮೂದಾಗದೇ ಹೋದವು. ಆದರೂ ಕೆಲವೇ ಕೆಲವು ಬೆರಳೆಣಿಕೆಯಷ್ಟು ವಿರಾಂಗನೇಯರ ಕುರಿತು ಹಾಡಿ ಹೊಗಳಿರುವುದು ಸಂತಸದ ವಿಷಯ. History means His-story ಅದು ಅವನ ಸಾಧನೆಗಳ ಕಥೆಯಾಯಿತು. HER-story ಆಗಲೇ ಇಲ್ಲ ನಮ್ಮ ಪುರುಷ ಪ್ರಧಾನ ವ್ಯವಸ್ಥೆ ಹೆಣ್ಣನ್ನು ಪ್ರತಿಯೊಂದು ಹಂತದಲ್ಲಿಯೂ ದ್ವಿತಿಯ ದರ್ಜೆಯವಳಾಗಿಯೇ ಕಾಣುತ್ತಾ ಬಂದಿವೆ. ಮಹಾಮೇಧಾವಿಯಾದ ಆಗಸ್ಟ್ ಬೆಬೆಲ್ ಹೇಳುವಂತೆ "ಮಹಿಳೆ ಬಂಧನಕ್ಕೊಳಗಾದ ಪ್ರಪಂಚದ ಮೊದಲ ಮಾನವ ಜೀವಿ. ಪುರುಷ ಗುಲಾಮ ಅಸ್ತಿತ್ವಕ್ಕೆ ಬರುವುದಕ್ಕಿಂತ ಮುಂಚೆಯೇ ಅವಳು ಗುಲಾಮಗಿರಿಗೆ ಬಲಿಯಾಗಿದ್ದಳು"[9] ಎಂಬ ಅಂಶ ತಿಳಿದುಬರುತ್ತದೆ. ಪುರುಷನಿಗಿಂತಲೂ ಮೊದಲು ಗುಲಾಮಳಾದ ಮಹಿಳೆ, ಇತಿಹಾಸದ ಪುಟಗಳಲ್ಲಿ ಗುಲಾಮಳಾಗಿ ಉಳಿದಳು ಹೊರತು ಪ್ರಧಾನಧಾರೆಗೆ ಬರಲಿಲ್ಲ. ಪುರುಷ ಪ್ರಧಾನ ವ್ಯವಸ್ಥೆಯ ಪ್ರಬಲತೆಯಿಂದ ಮಹಿಳೆಯರ ಸ್ಥಾನಮಾನಗಳು ಮರೆಯಾಗುತ್ತಾ ಬಂದಿವೆ. ಸನಾತನ ಕಾಲದಿಂದಲೂ ಮಹಿಳೆಗೆ ದ್ವಿತಿಯ ದರ್ಜೆಯ ಸ್ಥಾನಮಾನವನ್ನು ನೀಡುತ್ತಾ ಬಂದಿರುವುದರಿಂದ ಮಹಿಳೆಯರಲ್ಲಿರುವ ಆತ್ಮವಿಶ್ವಾಸ, ಆತ್ಮಸ್ಥೈರ್ಯ ಮತ್ತು ಆಂತರಿಕ ಶಕ್ತಿ ಕುಗ್ಗಿ ಹೋಯಿತು. ತನ್ನಿಂದ ಯಾವುದೇ ಕೆಲಸವಾಗುವುದಿಲ್ಲ ತಾನು ಕನಿಷ್ಠಳು ಎಂದು ಅವಳ ತಲೆಯಲ್ಲಿ ಭದ್ರವಾಗಿ ನೆಲಯೂರಿತು. ಈ ಕಾರಣದಿಂದಾಗಿ ಮಹಿಳೆಯರು ಪುರುಷನ ನಿಯಂತ್ರಣಕ್ಕೊಳಪಟ್ಟಂತಹ ಬದುಕು ಬಾಳುತ್ತಿದ್ದರು. ಮಹಿಳೆ ಪ್ರತಿಯೊಂದು ಕಾಲಘಟ್ಟದಲ್ಲಿಯೂ ಶೋಷಿತಳಾಗಿದ್ದಾಳೆ. ಪುರುಷ ಪ್ರಧಾನ ವ್ಯವಸ್ಥೆಯ ನಿಯಂತ್ರಕರಾಗಿರುವ ಪುರುಷರಿಂದ ಸದಾ ಕಾಲ ನಿಯಂತ್ರಣಕ್ಕೊಳಪಟ್ಟವಳಾಗಿದ್ದಾಳೆ. "ಸ್ತ್ರೀ ಪಶು ಮತ್ತು ಶೂದ್ರರನ್ನು ಒಂದೇ ನಿಟ್ಟಿನಲ್ಲಿ ಅಳೆಯುವ ಶಿಷ್ಟರ ಸಮಾಜ ಹೆಣ್ಣಿಗೆ ತುಂಬಾ ಅನ್ಯಾಯ ಮಾಡಿದೆ. ಕನಿಷ್ಟರ ಸಮಾಜದಲ್ಲಿಯಂತೂ ಸ್ತ್ರೀಗೆ ಯಾವುದೇ ಬಗೆಯ ವ್ಯಕ್ತಿತ್ವವೇ ಇರಲಿಲ್ಲ."[10]

ಹೀಗೆ ಇತಿಹಾಸದ ಪುಟಗಳಲ್ಲಿ ಕಳೆದು ಹೋಗಿರುವ, ಬಿಟ್ಟು ಹೋಗಿರುವ ಮಹಿಳೆಯರನ್ನು ಪ್ರಧಾನಧಾರೆಗೆ ತರುವ ಪ್ರಯತ್ನ ಅನೇಕ ಸ್ತ್ರೀವಾದಿಗಳದಾಗಿದೆ. ಮಹಿಳೆಯ ಚರಿತ್ರೆಯನ್ನು ಪುರುಷ ರಚಿತ ಇತಿಹಾಸದಿಂದಲೇ ತಿಳಿದುಕೊಳ್ಳುವ ಪ್ರಯತ್ನವೂ, ಪುರುಷ ಪ್ರಧಾನವಾದ ವ್ಯವಸ್ಥೆಯಲ್ಲಿ ಹೆಣ್ಣು ಏಕೆ ಅಧೀನಳಾಗಿದ್ದಾಳೆ ಪುರುಷನು ಪ್ರಥಮದರ್ಜೆಯವನಾಗಿ, ಮಹಿಳೆಗೆ ಏಕೆ ದ್ವಿತೀಯ ದರ್ಜೆಯ ಸ್ಥಾನ ನೀಡಿದ್ದಾರೆ? ಪುರುಷನಿಗೆ ಪ್ರಾಧಾನ್ಯತೆಯನ್ನು ನೀಡಿರುವುದನ್ನು ಪ್ರತಿ ಕುಟುಂಬದಲ್ಲಿಯೂ ಕಾಣುತ್ತೇವೆ. ಈ ವ್ಯವಸ್ಥೆಯನ್ನು ಗ್ರಹಿಸುವುದು ಮತ್ತು ಪುರುಷರಿಂದ ಭಿನ್ನವಾಗಿರುವ ಸಿದ್ಧಾಂತವನ್ನು ಮಹಿಳೆಯರಿಂದ ರಚಿಸುವುದು ಸ್ತ್ರೀವಾದದ ಗುರಿ, ಉದ್ದೇಶ ಮತ್ತು ವ್ಯಾಖ್ಯಾನವಾಗಿದೆ. ಮತ್ತು

ಸ್ತ್ರೀಯರಿಗೆ ಪ್ರಾಧಾನ್ಯತೆಯನ್ನು ನೀಡದೇ ಅವರು ದೈಹಿಕವಾಗಿಯೂ ಮತ್ತು ಮಾನಸಿಕವಾಗಿಯೂ ದುರ್ಬಲರಾಗಿದ್ದಾರೆಂಬುದನ್ನು ಮೇಲಿಂದ ಮೇಲೆ ಹೇಳುತ್ತಲೇ ಬಂದಿರುವುದರಿಂದ ಮಹಿಳೆಯಲ್ಲಿರುವ ಆತ್ಮಸ್ಥೈರ್ಯ ಕುಂದುವಂತೆ ವ್ಯವಸ್ಥೆ ನಂಬಿಸಿದೆ. ಈ ವ್ಯವಸ್ಥೆಯನ್ನು ಒಡೆದು ಪ್ರಶ್ನೆ ಮಾಡುವುದು ಮಹಿಳೆಯರ ಅಸ್ತಿತ್ವದ ಹುಡುಕಾಟದೊಂದಿಗೆ ಆಕೆಯ ಸಬಲೀಕರಣ ಶಿಕ್ಷಿತ ಮಹಿಳೆಯನ್ನಾಗಿ ಮಾಡುವುದು ಸ್ತ್ರೀವಾದಿಗಳ ಸಿದ್ಧಾಂತವಾಗಿದೆ.

ಮಹಿಳಾ ಬದುಕನ್ನು ಕಟ್ಟುವ ನಿಟ್ಟಿನಲ್ಲಿ ಅನೇಕ ಸ್ತ್ರೀವಾದಿಗಳ ಮಹತ್ತರವಾದ ಪಾತ್ರವಿದೆ. ಅವರ ಒಲವು ಕೇವಲ ಮೇಲ್ವರ್ಗದ ಮಹಿಳೆಯರಿಗೆ ಸೀಮಿತವಾಗಿರದೆ ಕೆಳವರ್ಗದ ಮಹಿಳೆಯರ ಕುರಿತಾಗಿಯೂ ಇತ್ತು. ಮಹಿಳೆ ಎಂದಾಕ್ಷಣ ಅವಳು ಸಮಾನ ಶೋಷಿತಳು, ಮೇಲ್ವರ್ಗದ ಮಹಿಳೆಯಾಗಿರಬಹುದು, ಕೆಳವರ್ಗದ ಮಹಿಳೆಯಾಗಿರಬಹುದು. ಸಮಸ್ಯೆಗಳ ಸ್ವರೂಪ ಭಿನ್ನವಾದರೂ, ಸಮಸ್ಯೆಗಳನ್ನು ಎದುರಿಸುವವರು ಮಹಿಳೆಯರೇ ಆಗಿದ್ದಾರೆ. ಮೇಲ್ವರ್ಗದ ಮಹಿಳೆಯರಿಗೆ ತಿಂದದ್ದು ಅರಗಿಸಿಕೊಳ್ಳಲು ಆಗದೇ ಇರುವಂತಹ ಸಮಸ್ಯೆಯಾದರೆ ಕೆಳವರ್ಗದ ಮಹಿಳೆಯರಿಗೆ ಹಸಿವಿನ ಚಿಂತೆ. ತಮ್ಮ ತುತ್ತಿನ ಚೀಲವನ್ನು ಹೇಗೆ ತುಂಬಿಸಿಕೊಳ್ಳಬೇಕು ಎನ್ನುವ ಸಮಸ್ಯೆ. ಈ ಸಮಸ್ಯೆಗಳು ಕೊಳಚೆ ಪ್ರದೇಶಗಳ ತೀರಾ ಅಂಚಿನ ಸಮುದಾಯದವರು ವಾಸಿಸುವ ನಗರಗಳಲ್ಲಿರುವ ಮಹಿಳೆಯರ ಬದುಕನ್ನು ದಿನನಿತ್ಯದಲ್ಲಿ ತಿಂದುಹಾಕುತ್ತಿರುವುದನ್ನು ಕಾಣುತ್ತೇವೆ.

**ಕೊಳಚೆ ಪ್ರದೇಶದ ಮಹಿಳೆಯರ ಬದುಕಿನ ಚಿತ್ರಣ**

ಬುದ್ಧ ನಗರದ ಓನಮ್ಮ ತನ್ನ ಜೀವನದ ಕಥೆಯನ್ನು ಹೀಗೆ ಬಿಚ್ಚಿಟ್ಟಳು. ಓನಮ್ಮ ಬಡ ಕುಟುಂಬದಿಂದ ಬಂದವಳು. ಕಿತ್ತು ತಿನ್ನುವ ಬಡತನ, ಕುಡಿತದ ಚಟವನ್ನಿಟ್ಟುಕೊಂಡಿದ್ದ ತಂದೆ. ಎಳೆಯ ವಯಸ್ಸಿನಲ್ಲಿಯೇ ತಾಯಿಯನ್ನು ಕಳೆದುಕೊಂಡ ಆರು ಜನ ಹೆಣ್ಣುಮಕ್ಕಳಲ್ಲಿ ನಾಲ್ಕನೆಯವಳಾದ ಓನಮ್ಮ ಅಕ್ಕಂದಿರು, ಅಜ್ಜಿಯ ಪಾಲನೆಯಲ್ಲಿ ಬೆಳೆದವಳು. ಮನೆಯಲ್ಲಿ ಬಡತನವಿರುವುದರಿಂದ ಅವಳು ಸಹ ದುಡಿಯಲು ಪ್ರಾರಂಭಿಸಿದಳು. ದೊಡ್ಡವಳಾದ ಮೇಲೆ ಓನಮ್ಮನ ಮದುವೆಯ ತಯಾರಿ ನಡೆಸಿದರು. ಚಿಕ್ಕ ಪ್ರಾಯದ ಹುಡುಗಿಯನ್ನು ವಯಸ್ಸಿನಲ್ಲಿ ಅವಳಿಗಿಂತಲೂ ಹಿರಿಯನಾದ ವಿಧುರನೊಂದಿಗೆ ಮದುವೆ ಮಾಡಿಕೊಡಲಾಯಿತು. ಮದುವೆಯಾದ ನಂತರ ಗಂಡನಿಂದ ತನ್ನ ಜೀವನ ಬೆಳಕಾಗಬಹುದೆಂದು ನಿರೀಕ್ಷಿಸಿದ್ದ ಅವಳಿಗೆ ದಿಗಿಲು ಬಡಿದಂತಾಯಿತು. ಮದುವೆಯಾದ ಗಂಡನಿಗೆ ಅತಿಯಾದ ಕುಡಿತದೊಂದಿಗೆ ಅನೇಕ ಚಟಗಳಿದ್ದವು. ಓನಮ್ಮನ ಬದುಕು ಬಾಣಲೆಯಿಂದ ಬೆಂಕಿಗೆ ಬಿದ್ದ ಹಾಗಾಯಿತು. ಮೈ ಮುರಿದು ದುಡಿದು ತನ್ನ ಗಂಡ, ಗಂಡನ ಸಂಬಂಧಿಕರನ್ನೆಲ್ಲ ಸಾಕುವ ಜವಾಬ್ದಾರಿ ಇವಳ ಹೆಗಲೇರಿತು. ದುಡಿಯುವ ಸ್ಥಳದಲ್ಲಿ ಗುತ್ತಿಗೆದಾರರಿಂದ, ಮತ್ತು ಮೇಲಧಿಕಾರಿಗಳಿಂದ ಮಾನಸಿಕ ಮತ್ತು ದೈಹಿಕ ಕಿರುಕುಳ ಇವನ್ನೆಲ್ಲ ಸಹಿಸಿಕೊಂಡೇ ತನ್ನ ಬದುಕನ್ನು ನೂಕುತ್ತಿದ್ದಾಳೆ. ಬದುಕಿನ ಪ್ರಶ್ನೆಯಿಂದಾಗಿ ಅನಿವಾರ್ಯವಾಗಿ, ದುಡಿಮೆ ಮಾಡಬೇಕಾದ ಪರಿಸ್ಥಿತಿ ಅವಳ ಮುಂದಿದೆ.

ಜಿಲಾನಾಬಾದ ಪ್ರದೇಶದ ಮೆಹಬೂಬಿ ಸಯ್ಯದ್‌ಳ ಕಥೆಯು ಓನಮ್ಮನಂತಲ್ಲದಿದ್ದರೂ ಅವಳು ತನ್ನ ಅದೃಷ್ಟವನ್ನು ಜರಿಯುತ್ತಲೇ ಜೀವನ ನಡೆಸುತ್ತಿದ್ದಾಳೆ.

ಮೆಹಬೂಬಿಯ ಮದುವೆಯೂ ಲಾರಿ ಚಾಲಕನಾಗಿರುವ ಸಯ್ಯದ್‌ಪಾಷಾನೊಂದಿಗೆ ನೆರವೇರಿತು. ಮದುವೆ ಮಾಡುವಾಗ ಬಡತನವಿದ್ದರೂ ಮಗಳು ಗಂಡನ ಮನೆಯಲ್ಲಿ ಸುಖವಾಗಿರಲಿ, ನಂತರ ಮುಂದೆ ತಲೆತಗ್ಗಿಸುವಂತಾಗಬಾರದೆಂಬ ಉದ್ದೇಶದಿಂದ ಚಿಕ್ಕ ಚಿಕ್ಕ ವಸ್ತುವಿನಿಂದ ಹಿಡಿದು ದೊಡ್ಡ ವಸ್ತುಗಳನ್ನು ಕೂಡ ಸಾಲ ಮಾಡಿ ಕೊಟ್ಟರು. ಸಯ್ಯದ್‌ಪಾಷಾನಿಗೆ ಹೆಂಡತಿಗಿಂತಲೂ ದುಡ್ಡಿನ ಮೇಲೆ ಪ್ರೀತಿ. ಮದುವೆಯಾದ ವರ್ಷದಲ್ಲಿಯೇ ವಾಜಿದನ ಜನನವಾಯಿತು. ಮೆಹಬೂಬಿಯ ಗಂಡ ಕೈಕೊಟ್ಟಿದ್ದೆ ವಾಜಿದನು ಹುಟ್ಟಿದ ಮೇಲೆ. ತಾನೂ ದುಡಿಯಲು ಬಾಂಬೆ, ಪೂಣೆಗೆ ಹೋಗಿ ನಾಲ್ಕು ಕಾಸು ಸಂಪಾದನೆ ಮಾಡಿಕೊಂಡು ಬರುತ್ತೇನೆ. ಮುಂದೆ ಮಗನ ಭವಿಷ್ಯವಿದೆ. ಅವನಿಗೆ ಒಳ್ಳೆಯ ಬಟ್ಟೆ, ಒಳ್ಳೆಯ ಶಿಕ್ಷಣವನ್ನು ಕೊಡಿಸೋಣ ಯಾವುದರಲ್ಲಿಯೂ ಕಡಿಮೆ ಮಾಡುವುದು ಬೇಡವೆಂದು ಹೇಳಿ ಹೆಂಡತಿಯ ಮನವೊಲಿಸಿ ತಾನು ದುಡಿಯಲು ಹೊರಟು ಹೋದ. ಹೊರಟು ಹೋದವನ ಅಂತರಾಳದ ಮಾತನ್ನು ಅರಿಯದ ಮೆಹಬೂಬಿ ಆ ದಿನವೇ ತನ್ನ ದುಃಖದ ಜೀವನ ಪ್ರಾರಂಭವಾಗುತ್ತದೆ ಎಂದೂ ಆಕೆ ಊಹಿಸಿಯೂ ಇರಲಿಲ್ಲ. ಮೆಹಬೂಬಿಯ ಮಗ ವಾಜಿದನಿಗೆ ಈಗ ಎಂಟುವರ್ಷ ವಯಸ್ಸು. ಮಗನ ಭವಿಷ್ಯವನ್ನು ಮುಂದು ಮಾಡಿಕೊಂಡು ದುಡಿಯಲು ಹೋದ ಸಯ್ಯದ್‌ಪಾಷಾನಿಗೆ ತನ್ನ ಮಗನನ್ನು ಒಂದು ಬಾರಿಯಾದರೂ ನೋಡಬೇಕು ಎನ್ನುವ ಮನಸ್ಸಾಗಲೇ ಇಲ್ಲ. ಸಯ್ಯದ್‌ಪಾಷಾ ಹೀಗೇಕೆ ಮಾಡಿದ ಎಂದು ಕೇಳಿದಾಗ ಅವನು ಮದುವೆಗಿಂತಲೂ ಮೊದಲು ಬೇರೊಬ್ಬಳೊಂದಿಗೆ ವಿವಾಹವಾಗಿದ್ದ. ನಂತರ ನನ್ನೊಂದಿಗೆ ವಿವಾಹ ಮಾಡಿಕೊಂಡ. ಈಗ ಅವಳೊಂದಿಗೆ ಸಂಸಾರ ನಡೆಸಲು ನನ್ನನ್ನ, ನನ್ನ ಮಗನನ್ನ ಅನಾಥರಾಗಿ ಬಿಟ್ಟು ಹೋಗಿದ್ದಾನೆ ಎಂದು ಕಣ್ಣೀರು ಸುರಿಸುತ್ತಾಳೆ. ಈಗ ಮೆಹೆಬೂಬಿ ತನ್ನ ಮಗನಿಗಾಗಿ ಬದುಕುತ್ತಿದ್ದಾಳೆ. ತವರು ಮನೆಯ ಆಸರೆಯನ್ನು ಪಡೆದು, ತನ್ನದೆ ಆದ ಬಾಡಿಗೆ ಮನೆಯಲ್ಲಿ ವಾಸಿಸುತ್ತಿದ್ದಾಳೆ. ಜೀವನೋಪಾಯಕ್ಕಾಗಿ ಖಾನಾವಳಿಗಳಲ್ಲಿ, ಹಾಸ್ಟೆಲ್‌ಗಳಲ್ಲಿ ಅಡುಗೆ ಮಾಡಿ ತನ್ನ ಜೀವನವನ್ನು ತಳ್ಳುತ್ತಿದ್ದಾಳೆ.

ಅಂಬೇಡ್ಕರ್ ಆಶ್ರಯ ಕಾಲೋನಿಯಲ್ಲಿ ವಾಸಿಸುವ ಪಾರ್ವತಿ ಗಂಡ ಬಂಡು, ಬಿಸಿಲು, ಚಳಿ, ಮಳೆಯನ್ನು ಲೆಕ್ಕಿಸದೆ ಪಾತ್ರೆ ಮಾರಲು ಬೆಳಿಗ್ಗೆ ಮನೆಯಿಂದ ಹೊರಟರೇ ಮತ್ತೆ ಮನೆ ಸೇರುವುದು ರಾತ್ರಿನೇ. ತವರು ಮನೆಯವರು ಹೇಳಿಕೊಳ್ಳುವಂತಹ ಶ್ರೀಮಂತರಿರಲಿಲ್ಲವಾದ್ದರಿಂದ ಕಡಿಮೆ ವೆಚ್ಚದಲ್ಲಿ ಮಗಳಿಗೆ ಯಾವುದೇ ಉಡುಗೊರೆಯನ್ನು ಕೊಡದೆ ಸರಳವಾಗಿ ಮದುವೆ ಮಾಡಿಕೊಟ್ಟರು. ತನಗೆ ತಕ್ಕಂತ ಜೀವನ ಸಂಗಾತಿ ಸಿಗಲಿಲ್ಲ, ತನಗೆ ತಕ್ಕಂತಹ ಮದುವೆ ಮಾಡಿಕೊಡಲಿಲ್ಲವೆಂದು ದಿನವು ಹಿನಾಮಾನವಾಗಿ ಬೈಯ್ಯುವ ಗಂಡ, ವಯಸ್ಸಿಗೆ ಬಂದ ಹೆಣ್ಣುಮಕ್ಕಳ ಮುಂದೆಯೇ ಅವಾಚ್ಯ

ಶಬ್ದಗಳಿಂದ ನಿಂದಿಸುವುದು, ಹೊಡೆಯುವುದು, ತನ್ನ ಜೀವನ ಹಾಳಾಗಿ ಹೋಯಿತು ಎಂದು ಹೇಳಿ ಪಾರ್ವತಿಯನ್ನು ದಿನವೂ ನಿಂದಿಸುತ್ತಾನೆ. ಹಗಲೆಲ್ಲಾ ಮನೆಮನೆಗಳಿಗೆ, ಬಡಾವಣೆಗಳಿಗೆ ಸುತ್ತಿ ಪಾತ್ರೆಗಳನ್ನು ಮಾರಾಟಮಾಡಿಕೊಂಡು ಸಂಜೆ ದಣಿದು ಮನೆಗೆ ಬಂದರೆ, ಆಕೆಯ ಗಂಡನ ಕಿರುಕುಳ ಮತ್ತೆ ಪ್ರಾರಂಭವಾಗುತ್ತದೆ. ದುಡಿಯಲು ಹೋಗದೆ ಮನೆಯಲ್ಲಿಯೇ ಕಾಲಹರಣ ಮಾಡುವ ಗಂಡ ಮನೆಗೆ ಬಂದ ಕ್ಷಣದಲ್ಲಿಯೇ, ತನ್ನ ಹೆಂಡತಿ ದಣಿದು ಬಂದಿದ್ದಾಳೆಂದು ಯೋಚಿಸದೇ ತನ್ನ ಕುಡಿತಕ್ಕೆ ದುಡ್ಡು ಕೊಡಬೇಕೆಂದು ಹಿಂಸೆ ಮಾಡುತ್ತಾನೆ. ಕೊಡದೇ ಇದ್ದ ಪಕ್ಷದಲ್ಲಿ ತವರುಮನೆಯನ್ನು ಜರಿಯುವುದು, ಆಕೆಯ ಶೀಲದ ಬಗ್ಗೆ ಅನುಮಾನ ಪಡುವುದು, ಮಾನಸಿಕವಾಗಿ ಹಿಂಸೆ ನೀಡುವುದು ಮಾಡುತ್ತಾನೆ. ಇದರಿಂದ ಬೇಸತ್ತ ಪಾರ್ವತಿ ಮನಸ್ಸಿಲ್ಲದಿದ್ದರೂ ದುಡ್ಡು ಕೊಡುತ್ತಾಳೆ. ಬೆಳೆದು ನಿಂತ ಹೆಣ್ಣುಮಕ್ಕಳ ಮದುವೆ ಮಾಡುವ ಜವಾಬ್ದಾರಿಯನ್ನು ಹೊತ್ತುಕೊಂಡು ತನ್ನಂತೆಯೇ ತನ್ನ ಮಕ್ಕಳ ಬದುಕು ಆಗಬಾರದು, ಒಳ್ಳೆಯ ಭವಿಷ್ಯವನ್ನು ಹೊಂದಬೇಕು ಎಂಬ ಆಶಾಕಿರಣವನ್ನಿಟ್ಟುಕೊಂಡು ತನ್ನ ಗಂಡನ ದುಷ್ಕೃತನಕ್ಕೆ ತನ್ನ ದುರಾದೃಷ್ಟಕ್ಕೆ ಕಣ್ಣೀರನ್ನಿಡುತ್ತಾ ಬಾಳ್ವೆ ನಡೆಸುತ್ತಿದ್ದಾಳೆ.

ಈ ಕಥೆಯು ಕೇವಲ ಓಸಮ್ಮ, ಮೆಹಬೂಬಿಸಯ್ಯದ, ಪಾರ್ವತಿಬಂಡು ಇವರದಾಗಿರದೇ ಇಂತಹ ಬದುಕು ಬದುಕುತ್ತಿರುವ ಎಷ್ಟೋ ಮಹಿಳೆಯರು ಕೊಳಚೆ ಪ್ರದೇಶಗಳಲ್ಲಿ ಕಾಣಸಿಗುತ್ತಾರೆ. ಈ ಕೊಳಚೆ ಪ್ರದೇಶಗಳಲ್ಲಿ ವಾಸಿಸುವ ಮಹಿಳೆಯರು ಎದುರಿಸುವ ಸಮಸ್ಯೆಗಳಿಗೆ ಲೆಕ್ಕವೇ ಇಲ್ಲ. ದಿನಬೆಳಗಾದರೆ ಸಾಕು ಸಮಸ್ಯೆಗಳು ಬಂದು ಮುತ್ತಿಕೊಳ್ಳುತ್ತವೆ. ಅದು ಆರೋಗ್ಯ, ಆರ್ಥಿಕ, ಶಿಕ್ಷಣ, ಸಾಮಾಜಿಕವೇ ಆಗಿರಬಹುದು. ಮೂಲಭೂತ ಅವಶ್ಯಕತೆಗಳಿಂದ ವಂಚಿತರಾಗಿರುವಂತಹ ಈ ಪ್ರದೇಶವು ಅನೇಕ ಸಮಸ್ಯೆಗಳ ಕೂಪವಾಗಿದೆ. ಬಡತನ, ಹಸಿವು, ನಿರುದ್ಯೋಗ, ರೋಗರುಜಿನಗಳು, ಕಳ್ಳತನ, ಅಪರಾಧಗಳು, ಬಾಲಾಪರಾದಗಳು ಹುಟ್ಟಿಕೊಳ್ಳುವ ತಾಣವಾಗಿದೆ. ಈ ಪ್ರದೇಶದಲ್ಲಿರುವ ಮಹಿಳೆಯರು ಎದುರಿಸುವ ಸಮಸ್ಯೆಗಳು ತೀರಾ ಕಷ್ಟಕರವಾಗಿವೆ. ತಮ್ಮ ಬದುಕು ಕೂಡ ಒಳ್ಳೆಯದಾಗುತ್ತದೆ. ಒಳ್ಳೆಯ ದಿನಗಳು ಬಂದು ತಮ್ಮ ಕಷ್ಟವೆಲ್ಲ ಪರಿಹಾರವಾಗುತ್ತವೆ ಎನ್ನುವ ಆಶಾಭಾವನೆಯನ್ನಿಟ್ಟುಕೊಂಡು ಬದುಕುತ್ತಿರುವ ಇವರ ಬದುಕು ತೀರಾ ಶೋಚನೀಯವಾಗಿರುವುದು ಎನ್ನುವುದರಲ್ಲಿ ಎರಡು ಮಾತಿಲ್ಲ. ಸಮಸ್ಯೆಗಳು ಪುರುಷನಿಗೆ ಮತ್ತು ಮಹಿಳೆಗೆ ಇಬ್ಬರಿಗೂ ಎದುರಾಗುತ್ತವೆ. ಆದರೆ ಅದರ ತೀವ್ರತೆಯನ್ನು ಅನುಭವಿಸುವವರು ಅಂತಿಮವಾಗಿ ಮಹಿಳೆಯರೇ ಆಗಿದ್ದಾರೆ.

**ಸಾಮಾಜಿಕ ಸ್ಥಿತಿ**

ಕೊಳಚೆ ಪ್ರದೇಶಗಳು ಸಾಮಾನ್ಯವಾಗಿ ನಗರದ ಮಧ್ಯಭಾಗದಲ್ಲೋ ಅಥವಾ ಕಟ್ಟಕಡೆಯ ಭಾಗದಲ್ಲೋ ಸ್ಥಾಪಿತವಾಗಿರುತ್ತದೆ. ಅನೇಕ ಸಾಮಾಜಿಕ ಸಮಸ್ಯೆಗಳ ಕೊಂಡಿಯಾಗಿರುವ ಈ ಪ್ರದೇಶ,

ದುಷ್ಟಕಾರ್ಯಗಳಿಗೆ, ಅನೈತಿಕ ವ್ಯವಹಾರಗಳಿಗೆ ಆಶ್ರಯತಾಣವಾಗಿರುತ್ತದೆ. ಅನಕ್ಷರಸ್ಥ ಜನರಿರುವುದರಿಂದ ತಿಳಿವಳಿಕೆಯ ಮತ್ತು ಮಾಹಿತಿಯ ಕೊರತೆಯಿರುತ್ತದೆ. ಕೌಟುಂಬಿಕ ಕಲಹಗಳು, ಹೆಂಡತಿಯ ಮೇಲೆ ಶೋಷಣೆ ಮಾಡುವ ಗಂಡಂದಿರು ಅಧಿಕ ಪ್ರಮಾಣದಲ್ಲಿ ಸಿಗುತ್ತಾರೆ. ತಮ್ಮ ಮಕ್ಕಳನ್ನು ಚಿಕ್ಕವಯಸ್ಸಿನಲ್ಲಿಯೇ ಮದುವೆ ಮಾಡಿಸಿ ಅನೇಕ ಸಮಸ್ಯೆಗಳಿಗೆ ಆಹ್ವಾನ ನೀಡುತ್ತಾರೆ. ಮಕ್ಕಳಿಗೆ ಶಿಕ್ಷಣವನ್ನು ಕೊಡಿಸುವ ಗೋಜಿಗೆ ಹೋಗದೆ ಮಕ್ಕಳ ಭವಿಷ್ಯವನ್ನು ಮದುವೆಯಲ್ಲಿ ಅಂತ್ಯಗೊಳಿಸುತ್ತಾರೆ. ಈ ರೀತಿಯಾಗಿ ಮದುವೆಯಾದ ಹೆಣ್ಣುಮಕ್ಕಳು ಅತ್ಯಂತ ಕಡಿಮೆ ವಯಸ್ಸಿನಲ್ಲಿಯೇ ಮಕ್ಕಳನ್ನು ಹೆರುತ್ತಾರೆ. ಅವರ ಆರೋಗ್ಯದ ಮೇಲೆ ಕೆಟ್ಟಪರಿಣಾಮ ಬೀರುತ್ತದೆ. ಅಲ್ಲದೆ ಮಾಹಿತಿಯ ಕೊರತೆಯಿಂದಾಗಿ ಮಕ್ಕಳನ್ನು ಹೆರುತ್ತಲೇ ಹೋಗುವುದರಿಂದ ಜನಸಂಖ್ಯೆಯ ಹೆಚ್ಚಳಕ್ಕೆ ದಾರಿ ಮಾಡಿಕೊಟ್ಟಂತಾಗುತ್ತದೆ. ಮಕ್ಕಳಿಗೆ ತಂದೆ-ತಾಯಿಯರು ಚಿಕ್ಕವಯಸ್ಸಿನಲ್ಲಿಯೇ ಒಳ್ಳೆಯ ನಡೆ-ನುಡಿ ನೈತಿಕತೆ-ಸಂಸ್ಕಾರವನ್ನು ಕೊಡದೇ ಇರುವುದರಿಂದ ಮುಂದೆ ಮಕ್ಕಳು ಕೆಟ್ಟಕೆಲಸಗಳಲ್ಲಿ ಭಾಗಿಯಾಗುತ್ತಾರೆ. ಹೆಣ್ಣುಮಕ್ಕಳು ಕೂಡ ಕೆಟ್ಟ ಚಟುವಟಿಕೆಗಳಲ್ಲಿ ತೊಡಗುತ್ತಾರೆ.

"ಪುರಷರು ಹಾಗೂ ಗಂಡು ಮಕ್ಕಳು ಜೂಜಾಟ, ಮದ್ಯಪಾನ, ಕಳ್ಳತನ, ಜೇಬುಗಳ್ಳತನ, ಕಳ್ಳಸಾಗಾಣಿಕೆ ಮುಂತಾದ ಸಮಾಜ ಕಂಟಕ ಚಟುವಟಿಕೆಗಳಲ್ಲಿ ತೊಡಗಿದರೆ ಸ್ತ್ರೀಯರು ಹಾಗೂ ಕಿಶೋರಿಯರು ವೇಶ್ಯಾವೃತ್ತಿಯಲ್ಲಿ ತೊಡಗುತ್ತಾರೆ. ಕೊಳಚೆ ಪ್ರದೇಶಗಳು ಪಾಪದ ಕೂಪವಾಗಿ ಎಲ್ಲಾ ಸಾಮಾಜಿಕ ಸಮಸ್ಯೆಗಳಿಗೂ ಕೇಂದ್ರಬಿಂದುವಾಗುತ್ತದೆ."[೬]

**ಆರ್ಥಿಕ ಸ್ಥಿತಿ**

ಅಸಂಘಟಿತ ಕೆಲಸಗಳೆಂದು ಗುರುತಿಸಿರುವ, ಎಲ್ಲಾ ಕೆಲಸಗಳಲ್ಲಿ ಪಾಲ್ಗೊಳ್ಳುವ ಮಹಿಳೆ ಮತ್ತು ಪುರುಷರು ಸಾಮಾನ್ಯವಾಗಿ ಕೊಳಚೆ ಪ್ರದೇಶಗಳ ವಾಸಿಗಳಾಗಿರುತ್ತಾರೆ. ಅಸಂಘಟಿತ ವಲಯದ ದುಡಿಮೆಯಲ್ಲಿ "ಕಡಿಮೆ ಕೂಲಿ ಹೆಚ್ಚು ಶ್ರಮ" ಎಂಬ ಸೂತ್ರವನ್ನು ಪಾಲಿಸಲಾಗುತ್ತದೆ. ಇಲ್ಲಿ ದುಡಿಯುವ ಕೈಗಳಿಗೆ ಕಡಿಮೆ ಆದಾಯ, ಅವರ ಮಾಸಿಕ ಆದಾಯ ರೂ. ೮೦೦ ದಾಟುವುದಿಲ್ಲ. ಈ ಜನರಿಗೆ ಈ ವಲಯದ ಕೆಲಸಗಳು ತಮ್ಮ ತುತ್ತಿನ ಚೀಲವನ್ನು ತುಂಬಿಸಿಕೊಳ್ಳಲು ಅನಿವಾರ್ಯವಾಗಿವೆ. ಕೆಲಸದ ಅಭದ್ರತೆ. ಯಾವ ಘಳಿಗೆಯಾದರೂ, ಯಾವ ದಿನವಾದರೂ ಕೆಲಸದಿಂದ ತೆಗೆದು ಹಾಕುವ ಸಂಭವ. ಇದು ಒಂದು ಚಿಂತೆಯಾಗಿ ದಿನ ನಿತ್ಯ ಕಾಡುತ್ತಿರುತ್ತದೆ. ಇನ್ನು ಹೆಣ್ಣುಮಕ್ಕಳ ಪರಿಸ್ಥಿತಿ ಹೇಳತೀರದು. ಬೇರೊಬ್ಬರ ಮನೆಯಲ್ಲಿ ಮನೆಗೆಲಸ ಮಾಡಿಕೊಂಡಿರುವ ಮಹಿಳೆಯರಿಗೆ ಶ್ರಮಕ್ಕೆ ತಕ್ಕ ಕೂಲಿ ದೊರೆಯುವುದೇ ಇಲ್ಲ. ಅವರ ಬದುಕಿಗೆ ಕೇವಲ ಬೆರಳೆಣಿಕೆಯಷ್ಟು ಶ್ರೀಮಂತ ಜನರು ಸ್ವಲ್ಪ ಕನಿಕರಪಟ್ಟು ಸಹಾಯ ಮಾಡಲು ಮುಂದಾಗುತ್ತಾರೆ. ಉಳಿದಂತೆ ಅವರಿಗೆ ನಿತ್ಯವೂ ಶ್ರಮದಾಯಕವಾದ ಕೆಲಸವೇ ಗತಿ. ಮನೆಯಲ್ಲಿರುವ ಬಡತನಕ್ಕೆ ಎಷ್ಟೋ ಜನ ಹೆಣ್ಣುಮಕ್ಕಳು ಅನಿವಾರ್ಯವಾಗಿ ತಮ್ಮ ಹೊಟ್ಟೆ, ಬಟ್ಟೆಗಾಗಿ ವೇಶ್ಯಾವೃತ್ತಿಗೆ ಇಳಿದಿರುವ ಉದಾಹರಣೆಗಳು

ದೊರೆಯುತ್ತವೆ. ವೇಶ್ಯಾವೃತ್ತಿ ಅವರಿಗೆ ಆಯ್ಕೆಯಾಗಿರುವುದಿಲ್ಲ. ಏಷ್ಟೋ ಹೆಣ್ಣುಮಕ್ಕಳು ತಾವೂ ಕೂಡ ಮದುವೆ ಮಾಡಿಕೊಂಡು ಗಂಡ ಮಕ್ಕಳೊಂದಿಗೆ ಸಂಸಾರ ನಡೆಸಬೇಕೆಂಬ ಮಹಾದಾಸೆಯನ್ನು ಹೊತ್ತಿರುತ್ತಾರೆ. ಆದರೆ ಬಡತನವೂ ಅವರ ಆಸೆಯನ್ನು ನುಚ್ಚುನೂರು ಮಾಡಿ ಅನಿವಾರ್ಯವಾಗಿ ಈ ವೃತ್ತಿಗಿಳಿಯುವಂತೆ ಮಾಡುತ್ತದೆ. "ಒಂದು ಅಂದಾಜಿನಂತೆ ಭಾರತದಲ್ಲಿ ಸದ್ಯ ೧೦ ಲಕ್ಷ ವೇಶ್ಯೆಯರಿದ್ದಾರೆ. ಪ್ರತಿ ದಿನ ೨೦೦ ಹೆಣ್ಣುಮಕ್ಕಳು ವೇಶ್ಯೆಯರಾಗುತ್ತಿದ್ದಾರೆ. ಈ ಪೈಕಿ ಶೇ. ೮೦ರಷ್ಟು ತಮ್ಮ ಇಚ್ಛೆಗೆ ವಿರುದ್ಧವಾಗಿ ಈ ದಂಧೆಗೆ ಇಳಿಯುತ್ತಿದ್ದಾರೆ."[೭] ಇದಕ್ಕೆ ಮೂಲ ಕಾರಣವನ್ನು ಹುಡುಕುತ್ತಾ ಹೊರಟರೆ ಸಿಗುವ ಏಕಮಾತ್ರ ಕಾರಣ ಬಡತನವಾಗಿದೆ.

**ಆರೋಗ್ಯದ ಸ್ಥಿತಿ**

ಕೊಳಚೆ ಪ್ರದೇಶಗಳು ಹೆಸರೇ ಸೂಚಿಸುವಂತೆ ಅನಾರೋಗ್ಯಕರವಾದ ವಾತಾವರಣವಿರುವ, ಕಲುಷಿತವಾದ ಗಾಳಿ, ನೀರಿನ ಅಭಾವ, ಅವ್ಯವಸ್ಥಿತವಾಗಿರುವ ಚರಂಡಿಗಳು, ನಿಂತನೀರು ರೋಗರುಜಿನಗಳಿಗೆ ತೆರೆದ ಆಹ್ವಾನ ನೀಡುತ್ತವೆ. ಎಲ್ಲೆಂದರಲ್ಲಿ ಮಲಮೂತ್ರ ವಿಸರ್ಜನೆ ಮಾಡುವ ಮಕ್ಕಳು ವಾತಾವರಣವನ್ನು ತೀರಾ ಹದಗೆಡಲು ಕಾರಣರಾಗುತ್ತಾರೆ. ಒಳ್ಳೆಯ ವಾತಾವರಣವಿರದ ಕಾರಣ ಅನಾರೋಗ್ಯಕ್ಕೆ ದಾರಿಮಾಡಿಕೊಳ್ಳುತ್ತಾರೆ. ಅತಿವೃಷ್ಟಿ ಮತ್ತು ಅನಾವೃಷ್ಟಿಯಿಂದ ಪ್ರಕೃತಿ ಎಸಗುವ ಘೋರವಾದ ಕೃತ್ಯಗಳಿಗೆ ಮೊದಲು ಬಲಿಯಾಗುವವರು ಈ ಪ್ರದೇಶದ ಜನರೇ. ಇರಲು ಒಳ್ಳೆಯ ಸೂರಿಲ್ಲದವರು ಒಳ್ಳೆಯ ಆಹಾರವಿಲ್ಲದಿರುವವರು ಆರೋಗ್ಯ ಹದಗೆಟ್ಟಾಗ ಸೂಕ್ತವಾದ ಚಿಕಿತ್ಸೆಯನ್ನು ಪಡೆಯದೇ ಇರುವರು. ಚಿಕಿತ್ಸೆ ಪಡೆಯಲು ಅವರಬಳಿ ಹಣ ಇರದಿರುವುದು ಇನ್ನೊಂದು ಸಮಸ್ಯೆ. ಆರೋಗ್ಯ ತೀರಾ ಹದಗೆಟ್ಟಾಗಲೇ ಆಸ್ಪತ್ರೆಗೆ ಹೋಗುವ ಮನಸ್ಸು ಮಾಡುತ್ತಾರೆ. ಇಲ್ಲವಾದರೆ ಯಾವುದಾದರೂ ಮನೆಮದ್ದು, ಅಂಗಡಿಯಲ್ಲಿ ದೊರೆಯುವ ಔಷಧಗಳನ್ನು ಪಡೆದುಕೊಂಡು ಸುಮ್ಮನಾಗುತ್ತಾರೆ. ಇಂತಹ ಔಷಧಿಗಳ ಸೇವನೆಯಿಂದ ಒಂದು ಸಮಸ್ಯೆಗೆ ಪರಿಹಾರ ಸಿಗುತ್ತದೆ ಎನ್ನುವುದರಲ್ಲಿ ಇನ್ನೊಂದು ಸಮಸ್ಯೆಗೆ ದಾರಿಮಾಡಿಕೊಡಲಾಗುತ್ತದೆ. ಕೆಲವೊಂದು ಬಾರಿ ಇಂತಹ ಔಷಧಗಳ ಸೇವನೆಯಿಂದ ಪ್ರಾಣ ಕಳೆದುಕೊಂಡಿರುವವರು, ಅಂಗವಿಕಲರಾಗಿರುವವರು ಇದ್ದಾರೆ.

ಬಡತನದ ಪರಿಸ್ಥಿತಿಯಲ್ಲಿರುವುದರಿಂದ ಅವರು ತಮ್ಮ ಆರೋಗ್ಯದ ಕಡೆಗೆ ಹೆಚ್ಚಿನ ಗಮನವನ್ನು ಹರಿಸುವುದಿಲ್ಲ. ಬೆಳಿಗ್ಗೆ ದುಡಿದ ಹಣದಿಂದಲೇ ರಾತ್ರಿ ಅನ್ನ ಕುದಿಸುವ ಜನರು ಆರೋಗ್ಯದ ಕಡೆಗೆ ಹೆಚ್ಚಿನ ಒಲವನ್ನು ತೋರುವುದೇ ಇಲ್ಲ. ಕೊಳಚೆ ಪ್ರದೇಶದ ಮಹಿಳಾ ಬದುಕಿನ ಸಮಸ್ಯೆಗಳನ್ನು ಕೆದಕುತ್ತಾ ಹೋದಂತೆಲ್ಲಾ ಅನೇಕ ವಿಷಯಗಳು ಬಹಿರಂಗಗೊಳ್ಳುತ್ತವೆ. ಕೊಳಚೆ ಪ್ರದೇಶದ ಮಹಿಳೆಯರು ತಮ್ಮ ದಿನನಿತ್ಯದ ಜೀವನದಲ್ಲಿ ಪಡುವ ಬವಣೆ ಹೇಳತೀರದು. ಒಬ್ಬ ಮಹಿಳೆಯಾಗಿ, ತಾಯಿಯಾಗಿ, ಹೆಂಡತಿಯಾಗಿ, ಸೊಸೆಯಾಗಿ, ಮನೆಯ ಎಲ್ಲ ಸದಸ್ಯರಿಗೆ ಇದ್ದುದರಲ್ಲಿಯೇ ತೃಪ್ತಿಪಡಿಸಿ ಅವರ ಬೇಕು ಬೇಡಗಳನ್ನು ಪೂರೈಸುವ ಗಂಡನೊಂದಿಗೆ ತಾನೂ

ಹೆಗಲುಕೊಟ್ಟು ಜೀವನದಲ್ಲಿ ಬರುವ ಎಲ್ಲ ಕಷ್ಟಗಳನ್ನು ನುಂಗಿಕೊಂಡು ನಗುಮೊಗದಿಂದಲೇ ತನ್ನ ಜೀವನವನ್ನು ಸಾಗಿಸುತ್ತಾ ಹೋಗುತ್ತಾಳೆ. ಅವಳಿಗೆ ತನ್ನ ಕಷ್ಟದ ಜೀವನದಿಂದ ಬಿಡುವು ದೊರೆಯುವುದೇ ಇಲ್ಲ. ಸಮಸ್ಯೆಗಳ ಮೇಲೆ ಸಮಸ್ಯೆಗಳು "ನೋಯುವ ಹಲ್ಲಿಗೆ ನಾಲಿಗೆ ತಾಗಿದಂತೆ" ಎಲ್ಲ ಸಮಸ್ಯೆಗಳು ಮಹಿಳೆಯನ್ನೆ ಕಿತ್ತು ತಿನ್ನುತ್ತವೆ. ಪುರುಷ ತನ್ನ ಸಮಸ್ಯೆಗಳಿಂದ ನುಣುಚಿಕೊಳ್ಳಲು ತನ್ನ ಕುಟುಂಬದವರನ್ನೆಲ್ಲಾ ಬಿಟ್ಟು ಬೇರೆ ಊರಿಗೆ ಹೋಗಿ ಇನ್ನೊಂದು ಮದುವೆ ಮಾಡಿಕೊಂಡು ತನ್ನ ಜೀವನಕ್ಕೆ ಪರ್ಯಾಯ ಮಾರ್ಗವನ್ನು ಕಂಡುಕೊಳ್ಳುತ್ತಾನೆ. ಆದರೆ ಅದೇ ಮಹಿಳೆ ಈ ರೀತಿಯಾದ ಮಾರ್ಗವನ್ನು ಕಂಡುಕೊಳ್ಳುವುದು ಸಾಧ್ಯವಿರದ ಮಾತಾಗಿದೆ.

ಈ ಪ್ರದೇಶದ ಮಹಿಳೆಯರು ತಮ್ಮ ಅಸ್ತಿತ್ವವನ್ನು ಗುರುತಿಸಿಕೊಳ್ಳಲು ಆಗದೆ ಇರುವಂತಹ ಪರಿಸ್ಥಿತಿಯು ನಿರ್ಮಾಣವಾಗಿರುತ್ತದೆ. ಮಹಿಳೆಯರ ಶೋಚನೀಯವಾದ ಇಕ್ಕಟ್ಟಾದ ಬದುಕಿಗೆ ಯಾರು ಕಾರಣ ಎಂಬ ಪ್ರಶ್ನೆ ಎದುರಾದರೆ ಅದಕ್ಕೆ ಸಿಗುವ ಉತ್ತರ, ಪುರುಷ ಪ್ರಧಾನ ಸಮಾಜ ಮತ್ತು ಈ ಸಮಾಜದ ನಿಯಂತ್ರಕರಾಗಿರುವ ಪುರುಷರು ಮಾತ್ರ.

**ಟಿಪ್ಪಣಿಗಳು**

೧. ಅರುಳ್‌ಸೆಲ್ವ : ಸ್ತ್ರೀ ಜಗತ್ತು : ಫೆಬ್ರುವರಿ ಸಂಚಿಕೆ, ೨೦೦೭, ಪುಟ ೧

೨. ರಾಜಶೇಖರ ಎಸ್. : ಸಾಮಾಜಿಕ ಸಮಸ್ಯೆಗಳು : ೨೦೦೦, ಪುಟ ೩೧೮, ೧೯

೩. ಜಿಲ್ಲಾ ಜನಸಂಖ್ಯೆಯ ಪುಸ್ತಕ (ಗುಲಬರ್ಗಾ) ಸಂಚಿಕೆ ೩೦, ೨೦೦೫, ಪುಟ ೫

೪. ಶ್ರೀಮತಿ ಎಚ್.ಎಸ್. (ಸಂ) ಹೆಜ್ಜೆ ಗುರುತು : ೨೦೦೬, ಸಂಚಿಕೆ ೩,೪,೫ ಪುಟ ೧೭

೫. ವಿಶ್ವನಾಥ ಕಾರ್ನಾಡ : ಸಮಚಿತ್ತ : ೨೦೦೪ ಪುಟ ೧೩೦, ೩೧

೬. ನಾರಾಯಣವಿಶ್ವ ಎಂ. : ನಗರ ಸಮಾಜಶಾಸ್ತ್ರ : ೨೦೦೭

೭. ಸಾಪ್ತಾಹಿಕ ಪುರವಣಿ (ಸಂಯುಕ್ತ ಕರ್ನಾಟಕ) ೬.೫.೨೦೦೭

ಅಧ್ಯಾಯ : ಮೂರು

# ಕೊಳಚೆ ಪ್ರದೇಶದ ಮಹಿಳಾ ಬದುಕಿನ ಸಾಮಾಜಿಕ ಸ್ಥಿತಿ-ಗತಿಗಳು

## ಅಧ್ಯಾಯ : ಮೂರು

# ಕೊಳಚೆ ಪ್ರದೇಶದ ಮಹಿಳಾ ಬದುಕಿನ ಸಾಮಾಜಿಕ ಸ್ಥಿತಿ-ಗತಿಗಳು

### ೩.೧ ಪೀಠಿಕೆ

ಸಾಮಾಜಿಕ ಬದುಕಿನಲ್ಲಿ ಪುರುಷ ಪ್ರಧಾನ ವ್ಯವಸ್ಥೆ ಜಾರಿಯಾದ ದಿನದಿಂದ ಹಿಡಿದು ಇಲ್ಲಿಯವರೆಗೂ ರೂಪಿಸಿರುವಂತಹ ನೀತಿ-ನಿಯಮಗಳು ಧರ್ಮದ ಹೆಸರಿನಲ್ಲಿ ಮಹಿಳೆಯರ ಮೇಲೆ ನಿಯಂತ್ರಣವನ್ನು ಹೇರುತ್ತಲೇ ಬಂದಿವೆ. ಪುರುಷರ ಇತಿಹಾಸದ ಮೂಲಕ ಮಹಿಳೆಯರ ಸ್ಥಾನಮಾನವನ್ನು ಗುರುತಿಸುವುದು ಹಿಂದಿನಿಂದಲೂ ಬಂದಿರುವಂತಹ ಪರಿಪಾಠವಾಗಿದೆ. ಮಹಿಳೆಯೂ ಸಮಾಜದಲ್ಲಿ, ಕುಟುಂಬದಲ್ಲಿ ಹೇಗೆ ನಡೆದುಕೊಳ್ಳಬೇಕೆಂಬ ರೀತಿ-ನೀತಿಗಳನ್ನು ಸೃಷ್ಟಿಸಿದ ವ್ಯವಸ್ಥೆಯು ಸಂವಿಧಾನದ ಕಾನೂನು ಕಟ್ಟಳೆಗಳಂತೆ ಸಾಂಪ್ರದಾಯಿಕವಾದ ಸಾಮಾಜಿಕ ನೀತಿ-ನಿಯಮಗಳು ನಿಯಂತ್ರಿಸುತ್ತಲಿವೆ. ಸಾಮಾಜಿಕ ವ್ಯವಸ್ಥೆಗಳು ಅಮೂರ್ತವಾಗಿವೆ, ಅಮೂರ್ತವಾಗಿರುವ ಸಂಪ್ರದಾಯಗಳನ್ನು ಪಾಲಿಸಿಕೊಂಡು ಹೋಗುವಂತೆ ಸಮಾಜದ ಒತ್ತಡ ಅವಳ ಮೇಲಿದೆ. ಹೆಣ್ಣು ಈ ಸಂಪ್ರದಾಯಗಳನ್ನು ಪಾಲಿಸಿಕೊಂಡು ಬರುವಲ್ಲಿ ಸ್ವಲ್ಪ ಏರುಪೇರಾದರೂ ಈ ಸಮಾಜ ಅವಳ ಮೇಲೆ ನಿಯಂತ್ರಣವನ್ನು ಹೇರುತ್ತದೆ. ಒಟ್ಟಿನಲ್ಲಿ ನಮ್ಮ ಸಂಪ್ರದಾಯ, ಆಚರಣೆಗಳೆಲ್ಲವೂ ಮಹಿಳೆಯರನ್ನು "ಬಂಗಾರದ ಪಂಜರ"ದಲ್ಲಿರಿಸಿ ಅವಳ ಮೇಲೆ ಅಧಿಕಾರವನ್ನು ಸ್ಥಾಪಿಸುತ್ತ, ಆ ಅಧಿಕಾರಕ್ಕೆ ಮರು ಮಾತನಾಡದೇ ಮೌನ ಸಮ್ಮತಿಯನ್ನು ಸೂಚಿಸುತ್ತಲೇ ವ್ಯವಸ್ಥೆಗೆ ಹೊಂದಿಕೊಂಡೇ ಬರುತ್ತಿದ್ದಾಳೆ.

"ಜಗತ್ತಿನ ಧರ್ಮಗಳ ಚರಿತ್ರೆಯು ಮಾತೃ ದೇವತೆಯ ಆರಾಧನೆಯ ನೆಲೆಯಿಂದ ಆರಂಭವಾಗಿ ಮಾನವನ ನಾಗರಿಕತೆಯ ಬೆಳವಣಿಗೆಯ ಜೊತೆಯಲ್ಲಿ ಬೆಳೆದು ಬಂದಿದೆ. ಈ ಚರಿತ್ರೆಯಲ್ಲಿ ಹೆಣ್ಣು ಆರಾಧನೆಯ ಅಥವಾ ಆಳಲ್ಪಡುವ ಸ್ಥಿತಿಗಳಲ್ಲಿ ಸೇರಿಕೊಂಡಿದ್ದಾಳೆ. ಜಗತ್ತಿನ ಸಕಲ ಸೃಷ್ಟಿಯ ಮೂಲದಲ್ಲಿರುವ ಪರತತ್ವವನ್ನು ಸ್ತ್ರೀಯ ರೂಪದಲ್ಲಿ ಕಂಡಂಥ ಧಾರ್ಮಿಕ ಪಂಥಗಳ ದೃಷ್ಟಿ ಹೆಣ್ಣನ್ನು

ಅತ್ಯುಚ್ಚ ಸ್ಥಾನದಲ್ಲಿ ಇರಿಸುತ್ತದೆ. ಧಾರ್ಮಿಕ, ಆಧ್ಯಾತ್ಮಿಕ ಸ್ತರಗಳಲ್ಲಿ ಹೆಣ್ಣು ಒಬ್ಬ ಸ್ವತಂತ್ರ ವ್ಯಕ್ತಿ ಎಂದಾಗಲಿ, ಮೋಕ್ಷದ ಹಕ್ಕು ಇರುವ ಮಾನವ ಜೀವಿ ಎಂದಾಗಲಿ, ಆತ್ಮವೆಂದಾಗಲೀ ಗುರುತಿಸದೇ ಆಕೆಯನ್ನು ನಿಕೃಷ್ಟ ಪ್ರಾಣಿಯಂತೆ ಕಾಣುವ ಧಾರ್ಮಿಕ ಪರಿಕಲ್ಪನೆಗಳು ಈ ಚರಿತ್ರೆಯ ಇನ್ನೊಂದು ತುದಿಯಾಗಿದೆ."[೧]

ಜಗತ್ತಿನ ಧರ್ಮಗಳು ಹೆಣ್ಣಿನ ಹುಟ್ಟನ್ನು ಅವಹೇಳನದಿಂದ ನೋಡುವುದರಿಂದ ಹಿಡಿದು ಆಕೆಯೇ ಮಾನವನ ಹುಟ್ಟಿಗೆ ಆಧಾರ ಎಂದು ಕೊಂಡಾಡುವವರೆಗೂ ಹರಡಿಕೊಂಡಿವೆ. ಒಂದು ಕಡೆ ಪೂಜ್ಯನೀಯ ಸ್ಥಾನದಲ್ಲಿರಿಸಿ ಪೂಜಿಸಿದರೆ, ಮತ್ತೊಂದು ಕಡೆ ತುಚ್ಛೀಕರಿಸಿರುವುದು ಕಂಡುಬರುತ್ತದೆ. ಹೆಣ್ಣನ್ನು ದೇವತೆಯನ್ನಾಗಿ, ದೈತ್ಯಳನ್ನಾಗಿ ರೂಪಿಸಿದವರು ಪುರುಷರೇ ಹೊರತು ಮಹಿಳೆಯರಲ್ಲ. ಹೆಣ್ಣು ಅವರ ಸೃಷ್ಟಿಗೆ ಹೊಂದಾಣಿಕೆಯಾಗುತ್ತಲೇ ಬಂದಿದ್ದಾಳೆ. ದೇವತೆ ಮಾಡಿದರೂ, ದೈತ್ಯಳನ್ನಾಗಿ ಮಾಡಿದರೂ ಒಪ್ಪಿಕೊಳ್ಳುತ್ತಲೇ ಬಂದಿದ್ದಾಳೆ. ಜಗತ್ತಿನ ಎಲ್ಲ ಧರ್ಮಗ್ರಂಥಗಳು ಹೆಣ್ಣನ್ನು ದ್ವಿತೀಯ ದರ್ಜೆಯವಳಾಗಿ ಕಂಡಿದೆ. ಅವಳ ಅಭಿಪ್ರಾಯಗಳಿಗೆ ಯಾವುದೇ ಬೆಲೆ ನೀಡದೆ, ಅವಳ ಬುದ್ಧಿ ಮೊಳಕಾಲ ಕೆಳಗೆ ಎನ್ನುವಂತಹ ನಂಬಿಕೆಗಳನ್ನು ಸೃಷ್ಟಿಸುತ್ತಲೇ ಬಂದಿದೆ. ಕುಟುಂಬದ ವಿಷಯದಲ್ಲಾಗಲೀ, ವಿವಾಹದ ವಿಷಯದಲ್ಲಾಗಲೀ ಅವಳ ಅಭಿಪ್ರಾಯಕ್ಕೆ ಯಾವುದೇ ಮಹತ್ವವನ್ನು ವ್ಯವಸ್ಥೆ ನೀಡಿಲ್ಲ.

## ೩.೨ ಮಹಿಳೆ ಮತ್ತು ಸಾಮಾಜಿಕತೆ

ವ್ಯಕ್ತಿಯ ಬದುಕು ಸಂಘಟಿತವಾಗಿ ಸಮೂಹ ದಿಕ್ಕಿನಲ್ಲಿ ಕಾರ್ಯಪ್ರವೃತ್ತರಾದ ದಿನದಿಂದಲೇ ಜನಸಮುದಾಯಗಳಲ್ಲಿ ಸಮಾಜದ ಅಸ್ತಿತ್ವ ಮೂಡಿ ಬಂದಿದೆ. ಈ ಸುಸಂಘಟಿತ ಸಮೂಹ ಬದುಕಿನ ಒಪ್ಪಂದದ ಬದುಕೇ ಸಾಮಾಜಿಕತೆಯಾಗಿದೆ. ಈ ಸಾಮಾಜಿಕ ಬದುಕು ಹೆಣ್ಣು-ಗಂಡಿಗೆ ಏಕಪ್ರಕಾರವಾಗಿಲ್ಲದಿರುವುದು, ಚಾರಿತ್ರಿಕವಾಗಿ ತಾರತಮ್ಯದಿಂದ ಬೆಳೆದು ಬಂದಿರುವುದು ಪ್ರಸ್ತುತ ಲಿಂಗೀಯ ಅಧ್ಯಯನಗಳ ಸಮಸ್ಯೆಯಾಗಿದೆ.

"ಹೆಣ್ಣು ಮಗುವಿಗೂ ಮತ್ತು ಗಂಡು ಮಗುವಿಗೂ ನೀಡುವ ಮೌಲ್ಯಗಳಲ್ಲಿ ತಾರತಮ್ಯವಿರುವುದು ಕಾಣುತ್ತೇವೆ. ಬಾಲ್ಯದಲ್ಲಿಯೇ ಸಮಾಜ ರೂಪಿಸಿರುವಂತಹ ಮೌಲ್ಯಗಳಿಗೆ ಒಪ್ಪಿಕೊಂಡು ಹೋಗಲು ಈ ಕುಟುಂಬವೇ ಮಧ್ಯಸ್ಥಿಕೆ ವಹಿಸಿರುತ್ತದೆ. "ತಾಯಿಯ ಸ್ತ್ರೀಯಾತ್ಮಕ ಗುಣಗಳನ್ನು ಪ್ರತಿನಿಧಿಸುವ ಪಾತ್ರ ಮಾದರಿಯನ್ನು ಬಾಲ್ಯದಿಂದಲೇ ಮಗಳಿಗೆ ಭೋದಿಸುವುದು ಜೊತೆಗೆ ಅವಳ ವರ್ತನೆ, ಮನೋಭಾವ, ಪ್ರವೃತ್ತಿಗಳನ್ನು ನೇರವಾಗಿ ಕೆಲವೊಮ್ಮೆ ಭಾಗಿಯಾಗದಿದ್ದರೂ ಪುರುಷಾತ್ಮಕ ಗುಣಗಳ ಪ್ರಾಬಲ್ಯವನ್ನು ಹುಡುಗಿಯ ಮನಸ್ಸಿನಲ್ಲಿ ನೆಲೆಗೊಳಿಸಲು ಸಹಕರಿಸುತ್ತಾನೆ. ಇದೇ ರೀತಿ ಗಂಡು ಮಕ್ಕಳಿಗೆ ಧೈರ್ಯ, ನಿರ್ಧಾರ ತೆಗೆದುಕೊಳ್ಳುವ ಅಧಿಕಾರ ಬರುವಂತಹ ವೃತ್ತಿ, ಮನೋಭಾವಗಳನ್ನು ಪ್ರೋತ್ಸಾಹಿಸಲಾಗುತ್ತದೆ."[೨]

ಸಾಮಾಜಿಕತೆ ಎಂಬುದರಲ್ಲಿಯೇ ಬಹುದೊಡ್ಡ ತೊಡಕಿದೆ. ಪುರುಷರ ಅಸ್ತಿತ್ವದೊಂದಿಗೆ ಮಹಿಳೆಯರ ಅಸ್ತಿತ್ವವನ್ನು ಗುರುತಿಸುವುದು ಸನಾತನ ಕಾಲದಿಂದಲೂ ಬೆಳೆದು ಬಂದಿರುವುದೇ ಸಾಮಾಜಿಕತೆಯಾಗಿದೆ.

ಪುರುಷ ಕೇಂದ್ರವಾಗಿ ಮಹಿಳೆ ಅವನ ಅಧೀನಳಾಗಿರುವ ಸಾಮಾಜಿಕತೆ ಇದೆ. ಸ್ತ್ರೀ ಪುರುಷರಿಬ್ಬರಿಗೂ ಸಮಾನವಾದ ಸಾಮಾಜಿಕತೆಯು ಸಿಗಬೇಕು. ಆದರೆ ಕುಟುಂಬದಲ್ಲಿ ಹೆಣ್ಣಾದವಳು ದುಡಿದು ತಂದಿರುವಂತಹ ಆದಾಯವನ್ನು ಪತಿಯ ಕೈಗೆ ನೀಡುತ್ತಾಳೆ. ತನ್ನ ಖರ್ಚಿಗಾಗಿ ಮತ್ತೆ ಗಂಡನ ಎದುರು ಕೈ ಚಾಚಬೇಕು. ಅದೇ ರೀತಿಯಾಗಿ ಯಾವುದೇ ವಿಷಯಕ್ಕೆ ಸಂಬಂಧಿಸಿದಂತಹ ನಿರ್ಣಯಗಳನ್ನು ತೆಗೆದುಕೊಳ್ಳುವುದು ಕೂಡ ಆಕೆಗೆ ನಿಷಿದ್ಧ. ಇದು ತಲೆತಲಾಂತರಗಳಿಂದಲೂ ಬಂದಿರುವಂತಹ ಪದ್ಧತಿಯಾಗಿರುವುದರಿಂದ ಈ ಪರಿಧಿಯಿಂದ ಹೊರಬರುವುದು ಸಾಧ್ಯವಾಗುತ್ತಿಲ್ಲ. ಸಾಮಾಜಿಕತೆಯಿಂದ ತಪ್ಪಿಸಿಕೊಂಡು, ಇರುವ ಮೌಲ್ಯ ವ್ಯವಸ್ಥೆಗೆ ವಿರುದ್ಧವಾಗಿ ಹೋಗುವುದು ಸಾಧ್ಯವಿಲ್ಲ. ಹೀಗಾಗಿ ಸಾಮಾಜಿಕತೆಯಲ್ಲಿ ಬದಲಾವಣೆಯಾಗದ ಹೊರತು ಮಹಿಳೆಯರ ಅಭಿವೃದ್ಧಿ ಸಾಧ್ಯವಿಲ್ಲ, ಅದು ಮೇಲ್ವರ್ಗದ ಮಹಿಳೆಯ ಬದುಕಾಗಿರಬಹುದು ಅಥವಾ ಕೆಳವರ್ಗದ ಮಹಿಳೆಯರ ಬದುಕಾಗಿರಬಹುದು.

ಈ ಕುಟುಂಬಗಳಲ್ಲಿನ ಮಹಿಳೆಯರ ಬದುಕು ಸಮಸ್ಯೆಗಳ ಕೂಪವಾಗಿರುತ್ತದೆ. ಮಹಿಳೆಯರಿಗಿರುವ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳಲು ಅವಳು ಯಾವ ರೀತಿಯಾದ ಬದುಕು ನಡೆಸುತ್ತಿದ್ದಾಳೆ ಎಂಬುದನ್ನು ಚಾರಿತ್ರಿಕವಾದ ಹಿನ್ನೆಲೆಯಿಂದ ಕಂಡುಕೊಳ್ಳಬೇಕು. ಆವಾಗಲೇ ತಿಳಿದು ಬರುವ ಅಂಶವೆಂದರೆ ಅವಳ ಬದುಕಿನ ಮೇಲೆ ಈ ವ್ಯವಸ್ಥೆಯು ಅಧಿಕಾರ ಸ್ಥಾಪಿಸಿದೆ, ನಿಯಂತ್ರಣವನ್ನು ಸಾಧಿಸಿದೆ. ನಿಯಂತ್ರಿತವಾಗಿರುವ ಬದುಕನ್ನು ಅರಿಯದ ಹೊರತು ಅವಳ ಬದುಕನ್ನು ರೂಪಿಸಲು ಸಾಧ್ಯವಿಲ್ಲ. ಸಾಂಪ್ರದಾಯಿಕ ನೆಲೆಯನ್ನು ಬಿಟ್ಟು ಮೂಲ ನೆಲೆಯಲ್ಲೇ ಹೇಳ ಹೊರಟರೆ ಶೋಷಣೆಯ ಸ್ವರೂಪ ದೊರೆಯುವುದಿಲ್ಲ. ಇದಕ್ಕೆ ಕಾರಣವಾಗಿರುವ ಕುಟುಂಬ, ಸಾಮಾಜಿಕತೆ ಮತ್ತು ಈ ವ್ಯವಸ್ಥೆ ರೂಪಿಸಿರುವಂತಹ ನೀತಿ-ನಿಯಮಗಳನ್ನು ತಿಳಿದುಕೊಳ್ಳಬೇಕಾಗುತ್ತದೆ. ಅಂದಾಗ ಮಾತ್ರ ಮಹಿಳೆಯ ಬದುಕಿನ ಚಿತ್ರಣ ದೊರೆಯುತ್ತದೆ.

ಮೇಲ್ವರ್ಗದ ಮಹಿಳೆಯರು ಎದುರಿಸುವ ಈ ಸಾಮಾಜಿಕತೆಯ ಮತ್ತು ಕುಟುಂಬ ವ್ಯವಸ್ಥೆಯ ಅಸಮಾನತೆಗೆ ತಾರತಮ್ಯತೆಗೆ ಕೊಳಚೆ ಪ್ರದೇಶದ ಕೆಳವರ್ಗದ ಮಹಿಳೆಯರು ಹೊರತಾಗಿಲ್ಲ. ಅವಳು ಕೂಡ ಶೋಷಣೆಗೆ ಗುರಿಯಾದವಳೇ ಆಗಿದ್ದಾಳೆ.

## ೩.೩ ಕುಟುಂಬ ವ್ಯವಸ್ಥೆ ಮತ್ತು ಮಹಿಳೆ

ಕುಟುಂಬ ಸಾಮಾಜಿಕ ವ್ಯವಸ್ಥೆಯ ಒಂದು ಮೂಲ ಘಟಕವಾಗಿದೆ. ಕುಟುಂಬದಲ್ಲಿ ಚಿಕ್ಕ ಮಕ್ಕಳಿಂದ ಹಿಡಿದು ವಯೋವೃದ್ಧರವರೆಗೂ ಎಲ್ಲರು ಒಂದೇ ಸೂರಿನಡಿಯಲ್ಲಿ ವಾಸಿಸುತ್ತಿರುತ್ತಾರೆ. ಕುಟುಂಬ ಮಗುವಿನ ಮೊದಲ ಪಾಠಶಾಲೆ, ತಾಯಿಯೇ ಮೊದಲ ಗುರುವಾಗಿದ್ದಾಳೆ. ಕುಟುಂಬವು ಮನೆಯ 'ಕರ್ತೃ'ನೆನಿಸಿಕೊಂಡಿರುವ ಯಜಮಾನನ ನಿಯಂತ್ರಣದಲ್ಲಿದ್ದು ಇತರ ಸದಸ್ಯರಿಗೆ, ಆಹಾರ, ಆಶ್ರಯ, ರಕ್ಷಣೆ, ಲೈಂಗಿಕ ಜೀವನಗಳಂಥ ಮೂಲಭೂತ ಅಗತ್ಯತೆಗಳ ಜೊತೆಗೆ ಪರಸ್ಪರ ಸಂಬಂಧ ಹಾಗೂ ಏಕತೆಯ ಭಾವನೆಗಳನ್ನು ಕುಟುಂಬವು ಒದಗಿಸುತ್ತದೆ.

"ಸಾಮಾಜಿಕ ನಡವಳಿಕೆ, ಶಿಸ್ತು, ನಿಯಮಪಾಲನೆ ಮುಂತಾದವುಗಳನ್ನು ಕುಟುಂಬ ಸಂಸ್ಥೆಯೇ ರೂಪಿಸುತ್ತದೆ. ಆದ್ದರಿಂದ ವ್ಯಕ್ತಿಯು ಹುಟ್ಟಿನಿಂದ ಸಾವಿನ ತನಕ ಕುಟುಂಬದಲ್ಲಿಯೇ ಇರುತ್ತಾನೆ. ಸಂತಾನೋತ್ಪತ್ತಿ, ಆರ್ಥಿಕ, ಸಾಮಾಜಿಕ, ಹಾಗೂ ಭಾವನಾತ್ಮಕ ಭದ್ರತೆಗಳನ್ನೊದಗಿಸುವ ಕುಟುಂಬವು ಸಮಾಜದ ಆಧಾರಸ್ತಂಭವಾಗಿದೆ. ಆಯಾ ಕಾಲದ ಸಂಸ್ಕೃತಿಯನ್ನು ಗಂಡು-ಹೆಣ್ಣುಗಳಲ್ಲಿ ಎರಕ ಹೊಯ್ಯುವ ಕುಟುಂಬ ಸಂಸ್ಥೆ ಅವರ ಪಾತ್ರಗಳು, ಜವಾಬ್ದಾರಿಗಳು ಮತ್ತು ಮಾದರಿಗಳನ್ನು ಕಟ್ಟು ನಿಟ್ಟಾಗಿ ಪಾಲಿಸುವಂತೆ ರೂಪಿಸಿದೆ."[೩]

ಈ ಜವಾಬ್ದಾರಿಗಳನ್ನು ವ್ಯವಸ್ಥಿತವಾಗಿ ನೋಡಿಕೊಂಡು ಹೋಗುವ ಕೆಲಸ ಮಹಿಳೆಯದಾಗಿದೆ. ಮನೆಯ ಇತರ ಸದಸ್ಯರ ಅವಶ್ಯಕತೆಗಳಿಗೆ ಸ್ಪಂದಿಸುವ ತನ್ನ ಪಾತ್ರಗಳನ್ನು, ಜವಾಬ್ದಾರಿಗಳನ್ನು ಸಮರ್ಥವಾಗಿ ನಿರ್ವಹಿಸಲು ಮಹಿಳೆ ಸದಾ ಸಿದ್ಧವಾಗಿರಬೇಕಾಗಿರುತ್ತದೆ. ಮಹಿಳೆಯನ್ನು ನಿಯಂತ್ರಿಸುವ ನಿಯಂತ್ರಕ ಕುಟುಂಬವೇ ಆಗಿದೆ. ಮಹಿಳೆಗೆ ಗೃಹಿಣಿತ್ವವೇ ಶ್ರೇಷ್ಠವೆಂದು ಹೇಳಿ ಆಕೆ ಮನೆಯ ಹೊರಗೆ ಹೋಗದಂತೆ, ಒಂದು ವೇಳೆ ಹೊರ ಪ್ರಪಂಚಕ್ಕೆ ಕಾಲಿಟ್ಟರೆ ಮನೆಯ ಪರಿಸ್ಥಿತಿ ಅಧೋಗತಿಗಿಳಿಯುತ್ತದೆ ಕೆಲಸ ಕಾರ್ಯಗಳಲ್ಲಿ ವಿಳಂಬವಾಗುತ್ತದೆ ಎಂದು ಹೇಳಿ ಆಕೆ ಬಾಹ್ಯ ಪ್ರಪಂಚಕ್ಕೆ ಬರುವುದನ್ನು ನಿಷೇಧಿಸಲಾಯಿತು. ಮನೆಯ ನಾಲ್ಕು ಗೋಡೆಗಳ ಮಧ್ಯ ಬಂಧಿಸಲಾಯಿತು.

ಒಬ್ಬ ವ್ಯಕ್ತಿ ಮಹಿಳೆಯಾಗಲಿ ಅಥವಾ ಪುರುಷನಾಗಲಿ ಪ್ರಗತಿಯನ್ನು ಹೊಂದಬೇಕಾದರೆ ಮತ್ತು ಪ್ರಗತಿಯು ಕುಂಠಿತಗೊಳ್ಳಬೇಕಾದರೆ ಕುಟುಂಬವು ಪ್ರಧಾನವಾದ ಪಾತ್ರವನ್ನು ನಿರ್ವಹಿಸುತ್ತದೆ. ಆದರೆ ಈ ಕುಟುಂಬ ಎನ್ನುವ ಸಂಸ್ಥೆ ಪುರುಷನಿಗೆ ನೀಡಿದಷ್ಟು ಪ್ರೋತ್ಸಾಹ ಮಹಿಳೆಗೆ ನೀಡುವುದಿಲ್ಲ. ಶಿಕ್ಷಣವನ್ನು ಪಡೆದುಕೊಳ್ಳುವುದು ಪುರುಷನ ಹಕ್ಕಾಗಿ ಮಾರ್ಪಡುತ್ತದೆ. ಅದೇ ಶಿಕ್ಷಣ ಮಹಿಳೆಯ ಬಾಧ್ಯತೆಯಾಗಿ ಬಿಡುತ್ತದೆ. ಮಹಿಳೆಯರಿಗಾಗಿಯೇ ಸಾಂಪ್ರದಾಯಿಕ ಅನೌಪಚಾರಿಕವಾದ ಶಿಕ್ಷಣವನ್ನು ನೀಡಲಾಗುತ್ತದೆ.

"ಕುಟುಂಬದ ಸದಸ್ಯರೆಲ್ಲರ ಪಾಲಿಗೆ ವಿಶೇಷವಾದ ಹಕ್ಕು ಬಾಧ್ಯತೆಗಳು ಅಲಿಖಿತವಾಗಿ ಬಂದಿರುತ್ತವೆ. ಪುರುಷ ಪ್ರಧಾನವಾದ ಈ ಸಮಾಜ ವ್ಯವಸ್ಥೆಯಲ್ಲಿ ಈ ಎಲ್ಲ ನಿಯಮಾವಳಿಗಳನ್ನೂ ರೂಪಿಸುವವನು ಪುರುಷನೇ ಎಂದ ಮೇಲೆ, ಸಹಜವಾಗಿಯೇ ಎಲ್ಲವೂ ಅವನ ಮೂಗಿನ ನೇರಕ್ಕೆ, ಅವನ ಅನುಕೂಲಕ್ಕೆ ಸರಿಯಾಗೇ ಇರುತ್ತದೆ. ಹಾಗಾಗಿ ಹಕ್ಕುಗಳೆಲ್ಲ ಪುರುಷನದು, ಬಾಧ್ಯತೆಗಳೆಲ್ಲವು ಹೆಂಗಸಿನದು ಎಂದಾಗಿ ಬಿಟ್ಟಿದೆ. ಈ ಎಲ್ಲದರ ಮುಖ್ಯ ಸೂತ್ರವಾಗಿ ವಿವಾಹ ಪದ್ಧತಿಯನ್ನು ರೂಪಿಸಲಾಗಿದೆ. ಹೆಂಗಸು ಹುಟ್ಟಿದ ಮನೆಯಲ್ಲಿ ಮಗಳಾಗಿ, ಸೋದರಿಯಾಗಿ, ಬಾಲ್ಯ, ಹರೆಯದ ದಿನಗಳನ್ನು ಕಳೆಯುತ್ತಿರುವಾಗಲೂ ಸೇರುವ ಮನೆಯಲ್ಲಿ ಹೇಗೆ ಬದುಕಬೇಕೆಂಬ ತರಬೇತಿಯಲ್ಲೇ ಬೆಳೆಯುತ್ತಾಳೆ."[೪]

ಪಿತೃಪ್ರಧಾನ ವ್ಯವಸ್ಥೆಯ ಕುಟುಂಬದಲ್ಲಿ ಗಂಡು ಸಂತಾನವನ್ನು ವಂಶಾಭಿವೃದ್ಧಿಯ ಮೂಲವೆಂದು ಪರಿಗಣಿಸುತ್ತ ಬಂದಿರುವುದರಿಂದ, ಹೆಣ್ಣು ಮಗುವು ಹುಟ್ಟಿದ ಮನೆ ತಾತ್ಕಾಲಿಕ ತಾಣವೆಂದು ಪರಿಭಾವಿಸಿ

ತಾರತಮ್ಯಕ್ಕೆ ಒಳಪಡಿಸಲಾಗಿದೆ. ಈ ತಾರತಮ್ಯವೇ ಮುಂದೆ ಅನೇಕ ಹಂತದ ತಾರತಮ್ಯಗಳಿಗೆ ದಾರಿ ಮಾಡಿಕೊಡುತ್ತದೆ. ಕುಟುಂಬದ ಎಲ್ಲ ಸದಸ್ಯರ ಅವಶ್ಯಕತೆಗಳನ್ನು ಪೂರೈಸುವ ಯಜಮಾನ ಪುರುಷನಾದ್ದರಿಂದ ಕುಟುಂಬದ ಎಲ್ಲರ ಮೇಲೆ ತನ್ನ ನಿಯಂತ್ರಣವನ್ನು ಸಾಧಿಸಿದ್ದಾನೆ. ಅದರಂತೆ ಮಹಿಳೆಯನ್ನು ಕೂಡ ತನ್ನ ಹಿಡಿತದಲ್ಲಿರಿಸಿಕೊಂಡು ಬಂದಿದ್ದಾನೆ. ಹೀಗಾಗಿ ಪುರುಷ ಪ್ರಧಾನವಾಗಿ, ಮಹಿಳೆ ಅಧೀನಳಾಗಿದ್ದಾಳೆ. ಇನ್ನೂ ದುಡಿಮೆಯ ವಿಷಯಕ್ಕೆ ಬಂದಾಗ ಗಂಡನು ದುಡಿದು ತಂದು ಹಾಕುವುದರಿಂದ ಅವನ ದುಡಿಮೆ ಉತ್ಪಾದಕವೆನಿಸುತ್ತದೆ ಮತ್ತು ಮೌಲ್ಯವೆನಿಸಿಕೊಳ್ಳುತ್ತದೆ, ಆದರೆ ಮಹಿಳೆಯ ಗೃಹವಾರ್ತೆಯು ಅನುತ್ಪಾದಕವಾಗಿ ಪರಿಗಣಿಸಲಾಗಿದ್ದರಿಂದ ಅವಳ ದುಡಿಮೆಗೆ ಯಾವುದೇ ಮೌಲ್ಯವಿಲ್ಲದೇ ಇರುವುದು ಕೂಡ ಅಧೀನತೆಗೆ ಕಾರಣವಾಗಿರುವ ಇನ್ನೊಂದು ಅಂಶವಾಗಿದೆ.

"ಮಹಿಳೆ ಪುರುಷನ ದಾಸ್ಯವನ್ನು ತೊರೆಯುವ ಮೂಲಕವೇ ತನ್ನ ಏಳ್ಗೆಗಾಗಿ ವಿಧಿ ವಿಧಾನಗಳನ್ನು ರೂಪಿಸಬಹುದು. ಅಂದರೆ ಮಹಿಳೆ ಕುಟುಂಬ ವ್ಯವಸ್ಥೆಯನ್ನು ಧಿಕ್ಕರಿಸಿ ಸಮಾನತೆಗಾಗಿ ಹೋರಾಡಬೇಕೆಂದಲ್ಲ. ಬದಲಿಗೆ ಮಹಿಳೆ ಕುಟುಂಬ ವ್ಯವಸ್ಥೆಯ ಚೌಕಟ್ಟಿನೊಳಗೆ ಸಮಾನತೆ ಸಾಧಿಸಬೇಕು."[೫]

ಸಾಂಪ್ರದಾಯಿಕ ನಂಬಿಕೆಗಳು, ನೀತಿ-ನಿಯಮಗಳು ಹೆಣ್ಣಿನ ಗೃಹವಾರ್ತೆಯನ್ನು ಎತ್ತಿ ಹಿಡಿದಿವೆ ಮತ್ತು ಪ್ರಮುಖವೆಂದು ಪರಿಗಣಿಸಿವೆ, ಆಕೆಯ ದುಡಿಮೆ ಅನುತ್ಪಾದಕವೆನಿಸಿ, ಅಪಮೌಲ್ಯವಾಗುತ್ತಿದೆ. ಪುರುಷ ಮಹಿಳೆಯನ್ನು ಕೇವಲ ಗೃಹವಾರ್ತೆಗಾಗಿ, ಸಂತಾನೋತ್ಪತ್ತಿಗಾಗಿ, ಭೋಗದವಸ್ತುವಾಗಿ ಮಾತ್ರ ಪರಿಗಣಿಸಿದ್ದಾನೆ ಹೊರತು ಅವಳ ದುಡಿಮೆಗೆ ಮಹತ್ವ ನೀಡಿಲ್ಲ. ಹೀಗಾಗಿ ಮಹಿಳೆಯರ ಕೆಲಸಗಳು ದುಡಿಮೆ ಎನಿಸಿಕೊಳ್ಳುತ್ತಿಲ್ಲ. ಮಹಿಳೆಯರ ಪಾತ್ರಕ್ಕೆ ಮಹತ್ವ ಬರುತ್ತಿಲ್ಲ. ಮನೆಯ ಸದಸ್ಯರ ಬೇಕು-ಬೇಡಗಳನ್ನು ಪೂರೈಸಿ ಅವರನ್ನು ಸುಸಂಸ್ಕೃತ ನಾಗರಿಕರನ್ನಾಗಿ ಮಾಡುವ ಜವಾಬ್ದಾರಿಯು ಕೂಡ ಅವಳದೇ ಆಗಿದೆ. ಒಂದು ವೇಳೆ ಮಕ್ಕಳೇನಾದರೂ ದಾರಿ ತಪ್ಪಿದರೆ ಸಮಾಜದ ಕಟು ಮಾತುಗಳು ಕೇಳುವುದು ಕೂಡ ಹೆಣ್ಣಿಗೇನೆ. ಹುಟ್ಟಿದ ಮಗುವನ್ನು ಸುಸಂಸ್ಕೃತ ನಾಗರಿಕನನ್ನಾಗಿ ಮಾಡುವ ಸಂಪೂರ್ಣ ಜವಾಬ್ದಾರಿ ಹೆಣ್ಣಿನ ಮೇಲಿದೆ. ಮಕ್ಕಳನ್ನು ಬೆಳೆಸುವ ಜವಾಬ್ದಾರಿ ಪತಿ-ಪತ್ನಿ ಇಬ್ಬರದ್ದಾಗಿದ್ದರೂ ಸಹ ಪತಿ ತನ್ನ ಜವಾಬ್ದಾರಿಯಿಂದ, ದುಡಿದು ತಂದುಹಾಕುವ ನೆಪದಲ್ಲಿ, ತನ್ನ ಕರ್ತವ್ಯದಿಂದ ವಿಮುಖನಾಗುತ್ತಿದ್ದಾನೆ. ಆದರೆ ಮಹಿಳೆಗೆ ಕರ್ತವ್ಯವನ್ನಾಗಿಸಿ, ಈ ಜವಾಬ್ದಾರಿಗಳೆಲ್ಲವೂ ಅವಳ ಹೆಗಲ ಮೇಲೆಯೇ ಹೇರಲಾಗಿದೆ. ಹೀಗಿರುವಾಗ ಅವಳು ಪರ್ಯಾಯ ಮಾರ್ಗಗಳನ್ನು ಹುಡುಕುವಂತೆಯೇ ಇಲ್ಲವೆಂಬುದು ಇಲ್ಲಿ ಗಮನಾರ್ಹ ವಿಷಯವಾಗಿದೆ.

### ೩.೩.೧ ನಂಬಿಕೆಗಳು ಹಾಗೂ ಸಂಪ್ರದಾಯಗಳು

ಹೆಣ್ಣಿನ ದೇಹ ಅಪವಿತ್ರವೆಂಬ ನಂಬಿಕೆ ಇರುವುದರಿಂದ ಹೆಣ್ಣಿಗೆ ಪ್ರತಿಯೊಂದು ವಿಷಯದಲ್ಲಿಯೂ ನಿಷೇಧವನ್ನು ಹೇರಲಾಗಿದೆ. ಹೆಣ್ಣಿನ ಜೈವಿಕತೆ ನಿಸರ್ಗ ನಿರ್ಮಿತವಾಗಿದ್ದರೂ ಕೂಡ ಅವಳನ್ನು ಅಸ್ಪೃಶ್ಯಳಲ್ಲಿ, ಅಸ್ಪೃಶ್ಯಳಂತೆ ಅದೃಶ್ಯ ಮಾಡಲಾಗಿದೆ. ಪ್ರತಿಯೊಂದು ಧರ್ಮವು ಕೂಡ ಅದರದೇ ಆದ

ಸಂಪ್ರದಾಯ ಆಚರಣೆಗಳು, ನಂಬಿಕೆಗಳನ್ನು ಒಳಗೊಂಡಿರುತ್ತದೆ. ಅದು ಅವರ ಧರ್ಮದ ಶ್ರೇಷ್ಠತೆಯನ್ನು ಬಿಂಬಿಸುತ್ತದೆ ಎಂಬುದು ಧರ್ಮದ ಅನುಯಾಯಿಗಳ ನಂಬಿಕೆಯಾಗಿದೆ. ಈ ನಂಬಿಕೆಗಳು ಹೇಗೆ ಸೃಷ್ಟಿಯಾದವು, ಅವುಗಳ ಸೃಷ್ಟಿಗೆ ಕಾರಣಗಳೇನು ಎಂಬುದನ್ನು ಮೊದಲು ಅರಿಯುವುದು ಮುಖ್ಯವಾಗಿದೆ.

"ಹಿಂದೂಧರ್ಮದ ಪ್ರಕಾರ ಸ್ತ್ರೀ ವೇದಾಧ್ಯಯನವನ್ನು ಮಾಡುವಂತಿಲ್ಲ. ಯಾವುದೇ ತರಹದ ಧರ್ಮ ಕಾರ್ಯಗಳನ್ನು ಕೈಗೊಳ್ಳುವಂತಿಲ್ಲ (ಮನೆ ದೇವರ ಪೂಜೆಯ ಕೆಲಸ ಅವಳದ್ದೇ ಆದರೂ) ಪವಿತ್ರ ಗ್ರಂಥಗಳ ಪಠಣವನ್ನು ಕೇಳಲು ಆಕೆ ಬಂದು ಕೂಡುವಂತಿಲ್ಲ. ಜಾತಿಸ್ತರದಲ್ಲಿ ಆಕೆಯ ಸ್ಥಾನ ಶೂದ್ರ ಸಮಾನ ಅದರಂತೆ ಸ್ತ್ರೀ ಕೂಡ "ಪಾಪಯೋನಿ" ಎಂದೇ ಕರೆಸಿಕೊಳ್ಳುವವಳು"[೬]

"ಅದೃಶ್ಯ ಅತೀಂದ್ರಿಯ ಶಕ್ತಿಯಲ್ಲಿಟ್ಟ ಭಕ್ತಿ, ಭರವಸೆ, ಭಾವುಕತೆ ಮತ್ತು ಜೀವಭಯ, ಸುಖಾಪೇಕ್ಷೆ, ನಿರೀಕ್ಷಣೆ, ಸಾದೃಶ್ಯ ಜ್ಞಾನ-ಊಹೆ-ಕಲ್ಪನೆ ಇತ್ಯಾದಿ ಮನುಷ್ಯ ಮನಸ್ಸಿನ ನೂರೆಂಟು ಪ್ರವೃತ್ತಿಗಳು ನಂಬಿಕೆಗಳ ಸೃಷ್ಟಿಗೆ ಕಾರಣವಾಗಿವೆ."[೭]

ಮನುಷ್ಯ ತನ್ನ ಮನೋದೌರ್ಬಲ್ಯವನ್ನು ಮುಚ್ಚಿಡಲು ಯಾವುದೋ ಅದೃಶ್ಯವಾದ ಅತೀಂದ್ರಿಯ ಶಕ್ತಿಯಲ್ಲಿ ನಂಬಿಕೆಯನ್ನಿಟ್ಟು ತನ್ನ ಸಫಲ ಜೀವನಕ್ಕೆ ಯಾವುದೇ ತೊಂದರೆಯಾಗದಂತೆ ನೋಡಿಕೊಂಡು ಹೋಗುವಂತೆ ಮೊರೆಯಿಡುವುದು ಒಂದು ನಂಬಿಕೆಯಾಗಿದೆ. ನಮ್ಮ ಧರ್ಮದಲ್ಲಿರುವ ಅನೇಕ ಸಂಪ್ರದಾಯಗಳು ಮತ್ತು ನಂಬಿಕೆಗಳು ಕೂಡ ಹೆಣ್ಣಿನ ಕುರಿತು ಅನೇಕ ರೀತಿ ನೀತಿಗಳನ್ನು ರೂಪಿಸಿದೆ. ಹೆಣ್ಣನ್ನು ಮನೆಯ ನಾಲ್ಕು ಗೋಡೆಗಳ ಮಧ್ಯೆ ಇಡಬೇಕು. ಆಕೆಯನ್ನು ಸದಾ ಪುರುಷರ ರಕ್ಷಣೆಯಲ್ಲಿಡಬೇಕು. "ಬಾಲ್ಯದಲ್ಲಿ ತಂದೆಯ, ಯೌವ್ವನದಲ್ಲಿ ಗಂಡನ ಮತ್ತು ಮುಪ್ಪಿನಲ್ಲಿ ಮಗನ" ರಕ್ಷಣೆಯಲ್ಲಿ ಸದಾ ಇರಬೇಕು, ಹೆಣ್ಣು ರಕ್ಷಣೆಯನ್ನು ಪಡೆಯುವವಳಾಗಿದ್ದಾಳೆ ಎಂಬ ನಂಬಿಕೆ ಸನಾತನ ಕಾಲದಿಂದಲೂ ಬೆಳೆದು ಬೇರು ಬಿಟ್ಟು ನಿಂತಿದೆ. ಹೆಣ್ಣಿನ ಮೂಲ ನಿಗೂಢವಾದುದು. ಭಾವನಾಶೀಲ, ವಿಶ್ಲೇಷಣಾತ್ಮಕ ಬುದ್ಧಿಯ ಕೊರತೆಯಿದೆ, ಅವಳು ಸದಾ ಅವಲಂಬಿತಳೇ ಆಗಿದ್ದಾಳೆ ಎಂಬ ನಿಷೇಧಾತ್ಮಕ ನಂಬಿಕೆಗಳಿಂದ ಹುಟ್ಟಿಕೊಂಡಿರುವ ಅಸಹಾಯಕತೆ, ಕೀಳರಿಮೆಗಳು ಮಹಿಳೆಯರನ್ನು ಅಧೀನ ಬದುಕಿಗೆ ದೂಡುತ್ತಿವೆ. ಸ್ವರ್ಗ-ನರಕಗಳೆಂಬ ನಂಬಿಕೆಗಳು, ಸತಿ ಸಹಗಮನ, ದೇವದಾಸಿ, ವರದಕ್ಷಿಣೆ, ಬೆತ್ತಲ ಸೇವೆಯಂಥ ಅಮಾನುಷ ಸಂಪ್ರದಾಯಗಳಿಗೆ ಕಾರಣವಾಗಿವೆ.

ಧಾರ್ಮಿಕ ಆಚರಣೆಗಳು, ಸಂಪ್ರದಾಯಗಳು ಮತ್ತು ನಂಬಿಕೆಗಳು ನಮ್ಮ ಕುಟುಂಬದಲ್ಲಿ ಹೇಗೆ ಹಾಸು ಹೊಕ್ಕಾಗಿವೆ ಎಂದರೆ ಹೆಣ್ಣು ಜೋರಾಗಿ ನಗುವುದು, ಹೊರಗಡೆ ನಿಲ್ಲುವುದು, ಓಡಾಡುವುದು, ಪರಪುರುಷರೊಂದಿಗೆ ಮಾತನಾಡುವುದು, ಹೆಚ್ಚಿಗೆ ನಿದ್ದೆ ಮಾಡುವುದು ಇವೆಲ್ಲವು ನಿಷಿದ್ಧ. ಇಂತಹ ನಂಬಿಕೆಗಳಿಂದಾಗಿ "ನಗುಮೊಗದ ಹೆಂಗಸನ್ನು ನಂಬಬಾರದು" "ಗಂಡು ಕೂತು ಕೆಟ್ಟರೆ ಹೆಣ್ಣು ತಿರುಗಿ ಕೆಟ್ಟಳು" "ಹೆಣ್ಣಿನ ಬುದ್ಧಿ ಮೊಳಕಾಲು ಕೆಳಗೆ" ಎನ್ನುವಂತಹ ಗಾದೆ ಮಾತುಗಳು ಹುಟ್ಟಿಕೊಂಡಿವೆ

ಎಂದರೆ ತಪ್ಪಾಗಲಾರದು. ಹಿಂದೂ ಧರ್ಮ ರೂಪಿಸಿದ ನಂಬಿಕೆಗಳಿಗೆ ಮತ್ತು ಸಂಪ್ರದಾಯಗಳಿಗೆ ಹೆಣ್ಣು ತಲೆಬಾಗಲೇ ಬೇಕಾಗಿದೆ.

ಪುರುಷ ನಿಷ್ಠ ಸಾಂಸ್ಕೃತಿಕ ಪರಿಸರದಲ್ಲಿಯ ಮಹಿಳೆಯ ಧಾರ್ಮಿಕ, ಸಾಮಾಜಿಕ, ಕೌಟುಂಬಿಕ, ಸ್ಥಾನಮಾನಗಳನ್ನು, ದೈಹಿಕ, ಮಾನಸಿಕ ನೆಲೆಗಳನ್ನು ವೃತ್ತಿ, ಪ್ರವೃತ್ತಿಗಳನ್ನು ಪರಿಚಯಿಸುವ ಸ್ತ್ರೀ ಕೇಂದ್ರಿತ ನಂಬಿಕೆಗಳನ್ನು ಡಾ.ಶಾಂತಾ ಇಮ್ರಾಪೂರ ಅವರು ಕೆಳಗಿನಂತೆ ವಿಂಗಡಿಸಿಕೊಂಡಿದ್ದಾರೆ.

೧. "ಧಾರ್ಮಿಕ ನಂಬಿಕೆಗಳು (ದೇವರು, ಧರ್ಮ, ಧಾರ್ಮಿಕ ಆಚರಣೆಗಳು, ಸಂಪ್ರದಾಯಗಳು)

೨. ಹೆಣ್ಣಿನ ಜೀವನ ಚಕ್ರಕ್ಕೆ ಸಂಬಂಧಿಸಿದ ನಂಬಿಕೆಗಳು (ಜನನ, ವಿವಾಹ, ಬಸಿರು, ಬಾಣಂತನ, ಬಂಜೆ, ವಿಧವೆ)

೩. ಹೆಣ್ಣಿನ ದೇಹ ರಚನೆ, ಗುಣ ಸ್ವಭಾವ ಸಂಬಂಧಿ ನಂಬಿಕೆಗಳು

೪. ಸ್ತ್ರೀ ಸಂಬಂಧಿ ವಸ್ತು ವಿಷಯಗಳನ್ನು ಕುರಿತಾದ ನಂಬಿಕೆಗಳು

೫. ಕೌಟುಂಬಿಕ ಬಾಂಧವ್ಯಗಳಿಗೆ ಸಂಬಂಧಿಸಿದ ನಂಬಿಕೆಗಳು

೬. ಮೂಢ ನಂಬಿಕೆಗಳು

೭. ವಿದೇಶಿಯರ ಸ್ತ್ರೀ ಕೇಂದ್ರಿತ ನಂಬಿಕೆಗಳು"[೮]

ಈ ನಂಬಿಕೆಗಳು ಹೆಣ್ಣಿನ ಕುರಿತಾಗಿ ಮಾತ್ರ ಹೇಳಲಾಗಿದೆ ಹೊರತು ಗಂಡಿನ ವಿಷಯಕ್ಕೆ ಬಂದಾಗ ಜಾಣ ಮೌನ ತಾಳುತ್ತವೆ. ಶೌರ್ಯ ಪರಾಕ್ರಮಗಳು ಪುರುಷನಿಗಾಗಿ ಒಲಿದು ಬಂದಿರುವಂತಹ ಗುಣಗಳು ಎಂಬುದನ್ನು ಪ್ರಚಾರ ಪಡಿಸಿವೆ. ಹೆಣ್ಣಿನ ಹುಟ್ಟಿನಿಂದ ಹಿಡಿದು ಸಾಯುವವರೆಗೂ ಅನೇಕ ನಂಬಿಕೆಗಳು, ಸಂಪ್ರದಾಯಗಳು, ಆಕೆಯ ದೇಹದ ಕುರಿತಾದ ಗುಣಗಳಿಗೆ ಸಂಬಂಧಿಸಿದ, ವೈವಾಹಿಕ ಬದುಕಿಗೆ ಸಂಬಂಧಪಟ್ಟಂತಹ ಆಚರಣೆಗಳು, ನಂಬಿಕೆಗಳು ಇರುವುವು. ಇಂತಹ ನಂಬಿಕೆಗಳಿಂದಾಗಿ ಮಹಿಳೆಯರು ತೀರಾ ವ್ಯಕ್ತಿತ್ವವನ್ನು, ಅಸ್ತಿತ್ವವನ್ನು ಕಳೆದುಕೊಂಡಂತಹ ಬದುಕು ಬಾಳುತ್ತಿದ್ದಾರೆ.

"ಸ್ತ್ರೀಯರು ತತ್ವಶಾಸ್ತ್ರವನ್ನು ಎಂದೂ ಅಧ್ಯಯನ ಮಾಡಬಾರದು, ವೈವಾಹಿಕ ನಿಯಮಗಳನ್ನು ಪಾಲಿಸುವುದೇ ಅವರಿಗೆ ಹೆಚ್ಚಿನ ತತ್ವ" (ಯೂರೋಪಿನ ಧರ್ಮ ಭೋದಕ) "ಸ್ತ್ರೀ ಬುದ್ಧಿವಂತಳಾಗುವುದಕ್ಕೆ ಬಯಸುವುದೇ ಮಹಾಪರಾಧ" (ಮಾರ್ಟಿನ್‌ಲೂಥರ್) "ಜ್ಞಾನವು ಪುರುಷನ ಗೌರವವನ್ನು ಹೆಚ್ಚಿಸಿದರೆ ಅಜ್ಞಾನವು ಸ್ತ್ರೀಯರ ಸೌಂದರ್ಯವನ್ನು ಹೆಚ್ಚಿಸುವುದು" (ಚೀನಿಗಾದೆ)"[೯] ಇಂತಹ ನಂಬಿಕೆಗಳು, ಗಾದೆಗಳು ಹುಟ್ಟಿಕೊಂಡಿರುವುದರಿಂದಾಗಿ ಹೆಣ್ಣು ಕತ್ತಲುಕೋಣೆಗೆ ನೂಕಲ್ಪಡುತ್ತಿದ್ದಾಳೆ. ಅವಳು ಸಶಕ್ತಳು ಎಂದು ಪುರುಷರು ಭಾವಿಸದಿರುವುದು ವಿಪರ್ಯಾಸದ ಸಂಗತಿಯಾಗಿದೆ. ಮಹಿಳೆ ಮತ್ತು ಪುರುಷ ಇಬ್ಬರೂ ಹುಟ್ಟಿನಿಂದ ಸಮಾನರಾಗಿ ಹುಟ್ಟುತ್ತಾರೆ. ಬೆಳೆಯುತ್ತಾ, ಬೆಳೆಯುತ್ತಾ ಇಬ್ಬರ ಪಾಲನೆಯಲ್ಲಿ ಭಿನ್ನತೆ

ಕಂಡುಬರುತ್ತದೆ. ಗಂಡಿಗೆ ಮುಂದಿನ ಜೀವನಕ್ಕಾಗಿ ಶಿಕ್ಷಣವನ್ನು ಒದಗಿಸಲಾಗುತ್ತದೆ. ಶೌರ್ಯ, ಪರಾಕ್ರಮಗಳಿಗಾಗಿ ಪ್ರೋತ್ಸಾಹಿಸಲಾಗುತ್ತದೆ. ಆದರೆ ಹೆಣ್ಣಿಗೆ ತನ್ನ ತಂದೆ-ತಾಯಿಗಳ ಮನೆಯು ತಾತ್ಕಾಲಿಕವಾದ ತಾಣವಾಗಿದ್ದು ಗಂಡನ ಮನೆ ಆಕೆಯ ಪಾಲಿಗೆ ಶಾಶ್ವತವೆಂದು ತಿಳಿದು ಮನೆಯಲ್ಲಿ ಅತಿಥಿಯಂತೆ ಬೆಳೆಸಲಾಗುತ್ತದೆ. ಅವಳಿಗೆ ಗಂಡನ ಮನೆಯಲ್ಲಿ ಯಾವ ರೀತಿ ಇರಬೇಕು ಎಂಬ ಸಾಂಪ್ರದಾಯಿಕ ಗೃಹಿಣಿತ್ವದ ಭೋದನೆಯನ್ನು ಮಾಡುತ್ತಾರೆ ವಿನಃ ಅವಳಿಗೂ ಕೂಡ ಗಂಡಿನ ಹಾಗೆ ಶಿಕ್ಷಣವನ್ನಾಗಲಿ, ಆತ್ಮ ವಿಶ್ವಾಸವನ್ನಾಗಲಿ ತುಂಬುವುದಿಲ್ಲ.



**ಸಂಪ್ರದಾಯಗಳು**

"ಕಾರ್ಯೇಷುದಾಸಿ, ಕರುಣೇಷು ಮಂತ್ರಿ, ಭೋಜ್ಯೇಷು ಮಾತಾ ಶಯನೇಷು ವೇಶ್ಯಾ ರೂಪೇಷುಲಕ್ಷ್ಮಿ, ಕ್ಷಮಯಾಧರಿತ್ರೀ ಷಡ್ಗುಣಯುಕ್ತಾ ಕುಲಮುದ್ಧರಿತ್ರಿ" ಪತ್ನಿಯಾದವಳು ವಿಭಿನ್ನ ಸನ್ನಿವೇಶದಲ್ಲಿ ವಿಭಿನ್ನ ಪಾತ್ರ ವಹಿಸುವುದರ ಮೂಲಕ ಪತಿಗೆ ಸಹಕಾರಿಯಾಗಿರಬೇಕೆನ್ನುವುದನ್ನು ಈ ಶ್ಲೋಕವು ವಿಷದಪಡಿಸುತ್ತದೆ."[೧೦] ಹೆಣ್ಣಿಗೆ ಬಾಲ್ಯದಿಂದ ಹಿಡಿದು ಮುಪ್ಪಿನವರೆಗೂ, ಕಾಲಿನಬೆರಳಿನಿಂದ ಹಿಡಿದು ತಲೆಯ ಕೂದಲವರೆಗೂ, ಸಂಪ್ರದಾಯಗಳು ಏನು ಹೇಳುತ್ತವೆಯೋ ಹಾಗೆ ನಡೆದುಕೊಳ್ಳಬೇಕೆಂದು ಸಾರುತ್ತವೆ. ಮದುವೆ ಎನ್ನುವುದು ಒಂದು ಸಂಪ್ರದಾಯ, ಮದುವೆಯಾದ ಮೇಲೆ ಆಕೆ ಓರ್ವ ಪತ್ನಿಯಾಗಿ, ಸೊಸೆಯಾಗಿ, ಅತ್ತಿಗೆಯಾಗಿ, ಗೃಹಿಣಿಯಾಗಿ ಇನ್ನೂ ಅನೇಕ ಪಾತ್ರಗಳಲ್ಲಿ ಹಂಚಿಹೋಗುತ್ತಾಳೆ. ಹೆಂಡತಿಯಾದವಳು ತನ್ನ ಮುತ್ತೈದೆತನದ ಪ್ರತೀಕವಾಗಿರುವಂತಹ, 'ಮಾಂಗಲ್ಯ, ಕುಂಕುಮ, ಬಳೆ, ಹೂವು, ಕಾಲುಂಗರಗಳನ್ನು ಧರಿಸಿರಬೇಕು', 'ಗಂಡನ ದೀರ್ಘಾಯುಷ್ಯ, ಆರೋಗ್ಯ ಸಮೃದ್ಧಿಗಾಗಿ ವ್ರತನೇಮಗಳನ್ನು ಪಾಲಿಸಿಕೊಂಡು ಹೋಗಬೇಕು' ಎಂಬ ಸಂಪ್ರದಾಯಗಳು, ಅದರಂತೆ ಗಂಡನನ್ನು ದೇವರೆಂದು ತಿಳಿಯಬೇಕು, ಗಂಡನ ಎಂಜಲು ತಾಟಿನಲ್ಲಿ ಉಣ್ಣಬೇಕು, ಗಂಡನ ಹೆಸರು ಹಿಡಿದು ಕರೆದರೆ ಅವನ ಆಯಸ್ಸು ಕಡಿಮೆಯಾಗುತ್ತದೆ, ಮತ್ತು ಮುತ್ತೈದೆ ಆಗಿ ಸಾಯುವುದರಿಂದ ಸ್ವರ್ಗ ಸಿಗುತ್ತದೆ ಎಂಬ ಸಂಪ್ರದಾಯಗಳು ನಮ್ಮ ಕುಟುಂಬ ಎಂಬ ಸಂಸ್ಥೆಯ ವಿವಾಹ ಎನ್ನುವ ಮೌಲ್ಯದ ಮೂಲಕ ಪುರುಷ ಹೇಳಿಕೊಟ್ಟಂತಹ ಸಂಪ್ರದಾಯಗಳನ್ನು ಮೌಲ್ಯಗಳನ್ನಾಗಿ ಒಪ್ಪಿಕೊಂಡು ಬಾಳುವಂತೆ ಮಾಡುತ್ತಾ ಬಂದಿದ್ದಾರೆ. ಇಂತಹ ಬಾಳು ಬಾಳುವ ಹೆಣ್ಣುಮಕ್ಕಳಿಗೆ ಪೂಜ್ಯನೀಯವಾದ ಸ್ಥಾನವನ್ನು ಮತ್ತು ಗೌರವವನ್ನು ಕೊಡುವುದಕ್ಕೆ ಸೂಕ್ತವೆಂದು ಹೇಳುತ್ತದೆ. ಗಂಡು ಗೌರವವನ್ನು ಪಡೆಯುವವನಾಗಿ, ಹೆಣ್ಣು ಗೌರವ ಕೊಡುವವಳಾಗಿ ಕಾಣಲಾಗುತ್ತದೆ. ಒಂದು ವೇಳೆ ಈ ಸಂಪ್ರದಾಯಗಳನ್ನು ಪಾಲಿಸಿಕೊಂಡು ಹೋಗದೆ ಇದ್ದಾಗ ಅಲ್ಲಿ ಮತ್ತೆ ಮಹಿಳೆಯನ್ನು ಅತ್ತೆಯ ರೂಪದಲ್ಲಿ ಮಧ್ಯಸ್ತಿಕೆಗಾಗಿ ನಿಲ್ಲಿಸಲಾಗುತ್ತದೆ. ಸೊಸೆಯಾದವಳು ತನ್ನ ಜವಾಬ್ದಾರಿಯನ್ನು ಅರಿತುಕೊಂಡು ಹೋಗುವಲ್ಲಿ ಎಲ್ಲಿಯಾದರೂ ಎಡವಿದರೆ ಮತ್ತೆ ಆ ಮೌಲ್ಯಗಳನ್ನು ಚಾಚುತಪ್ಪದೆ ಒಪ್ಪಿಕೊಂಡು ಬರುವಂತೆ ಅತ್ತೆಯ ಪಾತ್ರವಹಿಸಿದ ಹೆಣ್ಣಿನ ಮಧ್ಯಸ್ಥಿಕೆಯಿಂದ ಮುಂದುವರೆಸಿಕೊಂಡು ಹೋಗಲು ಪ್ರೇರೇಪಿಸುತ್ತದೆ. ಒಂದು

ವೇಳೆ ತನ್ನ ಅಧಿಕಾರದಿಂದ ವಿಮುಖಳಾದರೆ, ಪುರುಷ ಪ್ರಧಾನ ವ್ಯವಸ್ಥೆಯ ನಿಯಂತ್ರಕರಾಗಿರುವ ಪುರುಷರು ಅವಳಿಗೆ ತನ್ನ ಅಧಿಕಾರವನ್ನು ನೆನಪಿಸಿಕೊಡುವ ಸರ್ವಪ್ರಯತ್ನ ಮಾಡುತ್ತದೆ. ಅವಳ ಮಧ್ಯಸ್ಥಿಕೆಯಿಂದ ತಾನೂ ರೂಪಿಸಿರುವಂತಹ ಮೌಲ್ಯಗಳಿಗೆ ಧಕ್ಕೆ ಬರದಂತೆ, ಒಪ್ಪಿಕೊಂಡು ಮುಂದುವರೆಯುವಂತೆ ಮಾಡುತ್ತದೆ.

ಪುರುಷ ಪ್ರಧಾನ ವ್ಯವಸ್ಥೆಯು ಕಟ್ಟಿಕೊಟ್ಟಿರುವಂತಹ ಸಂಪ್ರದಾಯ, ನಂಬಿಕೆ ಆಚರಣೆಗಳೆಂಬ ಸಾಮಾಜಿಕ ಮೌಲ್ಯಗಳು ಮಹಿಳೆಯನ್ನು ಸದಾ ಆಳುತ್ತಲೇ ಇವೆ. ಚಾರಿತ್ರಿಕವಾದ ಹಿನ್ನೆಲೆಯನ್ನು ಗಮನಿಸಿದಾಗ ಮಹಿಳೆ ಪ್ರತಿಯೊಂದು ಹಂತದಲ್ಲಿಯೂ ಈ ಮೌಲ್ಯಗಳನ್ನು ಒಪ್ಪಿಕೊಳ್ಳುತ್ತಲೇ ಬರುವಂತೆ ಮಾಡಿದ್ದಾರೆ. ಇಂದಿಗೂ ಕೂಡ ಈ ಸಂಪ್ರದಾಯಗಳು ಹೆಣ್ಣಿನ ಮನೋಲೋಕದ ಮೇಲೆ ತನ್ನ ಸಂಪೂರ್ಣವಾದ ಅಧಿಪತ್ಯವನ್ನು ಸಾಧಿಸಿ ಕುಳಿತುಕೊಂಡಿದೆ. ಈ ಸಂಪ್ರದಾಯಗಳು ಇಂದಿನ ಯುಗದಲ್ಲಿಯೂ ಕೂಡ ತನ್ನ ಪ್ರಭುತ್ವವನ್ನು ಸಾಧಿಸಿದೆ. ಇಂದಿನ ಯುಗದಲ್ಲಿಯೂ ಕೂಡ ಒಬ್ಬ ಹೆಣ್ಣು ತನ್ನ ಗಂಡನ ಹೆಸರನ್ನು ಕೂಗಿ ಕರೆಯುವುದಿಲ್ಲ. ಗಂಡನ ಎಂಜಲು ತಟ್ಟೆಯಲ್ಲಿ ಊಟ ಮಾಡುವುದನ್ನು ಬಿಡುವುದಿಲ್ಲ. ಆಧುನಿಕತೆಯ ಪ್ರಭಾವಕ್ಕೆ ಒಳಗಾದ ಮೇಲ್ವರ್ಗದ ಮತ್ತು ಮೇಲ್ಜಾತಿಯ ಮಹಿಳೆಯರು ಇನ್ನೂ ಪೂರ್ವಾಗ್ರಹಪೀಡಿತರಾಗಿಯೇ ಇದ್ದಾರೆ. ಈ ಪೂರ್ವಾಗ್ರಹಪೀಡಿತ ಸಾಂಪ್ರದಾಯಿಕ ಮೌಲ್ಯಗಳು ಮಹಿಳೆಯ ಅಭಿವೃದ್ಧಿಗೆ ತೊಡಕಾಗುತ್ತವೆ. ಈ ವ್ಯವಸ್ಥೆ ಹಾಕಿಕೊಟ್ಟಿರುವಂತಹ ಚೌಕಟ್ಟಿನ ಎಲ್ಲೆಯನ್ನು ಮತ್ತು ತನ್ನ ಸೇವಕಾರ್ಯಗಳನ್ನು ಮೀರಿ ಬರದಂತೆ ಕಟ್ಟಿಹಾಕಿದೆ. ತೀರಾ ಅಂಚಿನ ಸಮುದಾಯದವರ ವಿಷಯಕ್ಕೆ ಬಂದಾಗ ಶಿಕ್ಷಣವಿಲ್ಲದೇ ಇರುವ, ನೈತಿಕತೆಯ ಗಂಧ ಗೊತ್ತಿರದ ಪುರುಷರು, ತೀರಾ ಆಕ್ರಮಣಕಾರಿಯಾದ ಸ್ಥಿತಿಯನ್ನು ಮಹಿಳೆಯ ಎದುರು ತಂದೊಡ್ಡಿದ್ದಾರೆ. ಈ ವ್ಯವಸ್ಥೆ ಹಾಕಿರುವ ಚೌಕಟ್ಟನ್ನು ಮೀರಿ ಬರದೇ ಮಹಿಳೆಯ ಅಭಿವೃದ್ಧಿ ಸಾಧ್ಯವಿಲ್ಲ. ಹೀಗಾಗಿ ಮೊದಲು ನಮ್ಮ ಸಮಾಜ ರೂಪಿಸಿದಂತಹ ಪೂರ್ವಾಗ್ರಹಪೀಡಿತ ಸಂಪ್ರದಾಯಗಳು, ಆಚರಣೆಗಳು ಆಕೆಯನ್ನು ಬಂಧ ಮುಕ್ತವನ್ನಾಗಿ ಮಾಡಬೇಕು ಅಂದಾಗ ಮಾತ್ರ, ಮಹಿಳೆಯರ ಅಭಿವೃದ್ಧಿ ಸಾಧ್ಯವಾಗುತ್ತದೆ.

### ೩.೩.೨ ಸಾಂಪ್ರದಾಯಿಕ ಗೃಹಿಣತ್ವ

ನಮ್ಮ ಪುರುಷ ಪ್ರಧಾನ ಸಮಾಜದಲ್ಲಿ ಸನಾತನ ಕಾಲದಿಂದಲೂ ಹೆಣ್ಣಿಗೆ ಅನೇಕ ಸಂಪ್ರದಾಯಗಳಲ್ಲಿ, ನಂಬಿಕೆಗಳ ಚೌಕಟ್ಟಿನೊಳಗೆ ಕಟ್ಟಿಡುವ ಪ್ರಯತ್ನಗಳು ನಡೆದು ಬಂದಿವೆ ಮತ್ತು ನಡೆಯುತ್ತಲೇ ಇವೆ. ನಮ್ಮ ಸಮಾಜ, ಧರ್ಮ, ಜನಪದ ಮಹಿಳೆಯರನ್ನು ಸಾಂಪ್ರದಾಯಿಕತೆಯ ಅಡಿಯಲ್ಲಿ ಅನೇಕ ಸಂಬಂಧಗಳನ್ನು ಪಾಲಿಸಿಕೊಂಡು ಬರುವಂತೆ ಮಾಡಿವೆ. ಮೊದಲು ಒಬ್ಬ ಹೆಣ್ಣಾಗಿ ನಂತರ ತಾಯಿಯಾಗಿ, ಮಗಳು, ಸೋದರಿ, ಹೆಂಡತಿ, ಸೊಸೆ, ಮುತ್ತೈದೆ, ವಿಧವೆ, ಗೃಹಿಣಿ ಹೀಗೆ ಇನ್ನೂ ಅನೇಕ ಸಾಂಪ್ರದಾಯಿಕ ಸಂಬಂಧಗಳನ್ನು ನಿಭಾಯಿಸುವ ಜವಾಬ್ದಾರಿಯನ್ನು ಮಹಿಳೆಯ ಹೆಗಲ ಮೇಲೆ ಹೇರಲಾಗಿದೆ. ಪುರುಷ ಪ್ರಧಾನ ಸಮಾಜವು ಹೆಣ್ಣಾದವಳು ಹೀಗೆಯೇ ಇರಬೇಕು ಅವಳ ನಡೆ-ನುಡಿ,

ಉಡುಗೆ-ತೊಡುಗೆಗಳು, ಹೀಗೆಯೇ ಇರಬೇಕೆಂದು, ಇನ್ನುಳಿದಂತೆ ಅನೇಕ ವಿಷಯಗಳಲ್ಲಿಯೂ ಕೂಡ ಪುರುಷ, ಧರ್ಮ ಮತ್ತು ದೇವರ ಹೆಸರಿನಲ್ಲಿ ತನ್ನಿಷ್ಟಕ್ಕೆ ತಕ್ಕಂತಹ ಮೌಲ್ಯಗಳನ್ನು ರೂಪಿಸುತ್ತಾ ಆ ಮೌಲ್ಯಗಳನ್ನು ಸಂಪ್ರದಾಯಗಳೆಂದು ಪಾಲಿಸಿಕೊಂಡು ಬರುವಂತೆ ಈ ವ್ಯವಸ್ಥೆ ಮಾಡಿದೆ. ಹೆಣ್ಣನ್ನು ಸದಾ ತನ್ನ ನಿಯಂತ್ರಣದಲ್ಲಿರಿಸಿಕೊಳ್ಳುವ ಪ್ರಯತ್ನಗಳಿಗೆ ಈ ಸಂಪ್ರದಾಯಗಳು, ಧರ್ಮ, ಆಚರಣೆಗಳು, ನಂಬಿಕೆಗಳು ಪ್ರಬಲ ಅಸ್ತ್ರಗಳಾಗಿವೆ. ಈ ಸಾಂಪ್ರದಾಯಿಕ ಸಂಬಂಧಗಳಿಗೆ ಅದರದೇ ಆದ ಮಹತ್ವವಿರುವುದನ್ನು ನಮ್ಮ ಧರ್ಮಗ್ರಂಥಗಳು, ಪುರಾಣಗಳು, ಪುಣ್ಯಕಥೆಗಳು, ಜನಪದ ಹಾಡುಗಳು, ಸಾರುತ್ತಲೇ ಬಂದಿವೆ. ತಾಯಿಯಾದವಳು ತನ್ನ ಕರ್ತವ್ಯವೇನೆಂದು ತನ್ನ ಜವಾಬ್ದಾರಿ ಏನೆಂಬುದನ್ನು ಅರಿತುಕೊಂಡು ಬಾಳುವಂತೆಯೇ, ಹೊಸದಾಗಿ ಮದುವೆಯಾದ ಸೊಸೆಯ ಕರ್ತವ್ಯ, ಜವಾಬ್ದಾರಿಗಳೇನೆಂಬುದನ್ನು ತಿಳಿಸಿಕೊಡಬೇಕಾದ ಜವಾಬ್ದಾರಿ ಅತ್ತೆಯಾದ ಹೆಣ್ಣಿನ ಕೆಲಸವಾಗಿರುತ್ತದೆ. ಪ್ರತಿಯೊಂದು ಸಾಂಪ್ರದಾಯಿಕ ಸಂಬಂಧಗಳಿಗೆ ನಿಷ್ಠೆಯಿಂದ ಇರಬೇಕು ಅವರವರ ಕರ್ತವ್ಯಗಳನ್ನು ಪಾಲಿಸಿಕೊಂಡು ಹೋಗಬೇಕೆಂದು ನಮ್ಮ ಜನಪದವು ಹೇಳುತ್ತದೆ, ಮತ್ತು ಹಾಗೆ ಇರಬೇಕೆಂದು ಬಯಸುತ್ತದೆ. ಈ ಜನಪದ, ಪುರಾಣಗಳು, ಪುಣ್ಯ ಕಥೆಗಳು, ಧರ್ಮಗ್ರಂಥಗಳೆಲ್ಲವು ಅನೇಕ ಮೌಲ್ಯಗಳನ್ನು ಬಿಂಬಿಸುತ್ತದೆ. ಅದರಲ್ಲಿ ಹೆಣ್ಣಿಗೆ ಪತಿನಿಷ್ಠೆ, ಪತಿಸೇವೆ, ಪಾತಿವ್ರತ್ಯ ಮತ್ತು ಗೃಹಿಣಿತ್ವ ಈ ಮೌಲ್ಯಗಳಿಗೆ ಹೆಚ್ಚಿನ ಒಲವನ್ನು ಕೊಡಲಾಗಿದೆ. "ಹದಿನೈದು ಹದಿನಾರನೆಯ ಶತಮಾನದಲ್ಲಿ ದಾಸರು, ಸಂತಕವಿಗಳು, ಸರ್ವಜ್ಞ ಮುಂತಾದವರು ಪತಿವ್ರತಾ ಧರ್ಮಕ್ಕೆ ಹೆಚ್ಚು ಒತ್ತು ಕೊಟ್ಟಿದ್ದು ಈ ಕಾಲದಲ್ಲಿ ಪತಿವ್ರತಾಧರ್ಮವೆಂಬುದು ಹೆಣ್ಣಿನಶೀಲಕ್ಕೆ ಸಂವಾದಿಯಾಗಿ ಬಳಕೆಗೆ ಬಂದಿದೆ."[೧೧]

ಗೃಹ ಎಂದರೆ ಅದೊಂದು ಭೌತಿಕವಾದದ್ದು ಅದಕ್ಕೆ ಜೀವಂತಿಕೆಯನ್ನು ತುಂಬುವವಳು ಗೃಹಿಣಿ, ಅವಳಿಂದಾಗಿಯೇ ಮನೆಯೂ ಸುಂದರವಾಗಿರುತ್ತದೆ. ಆದರೆ ಈ ಗೃಹವನ್ನು ನಿಯಂತ್ರಿಸುವವನು ಯಜಮಾನ ಸ್ಥಾನದಲ್ಲಿರುವವನು ಪುರುಷನಾಗಿದ್ದರಿಂದ ಗೃಹವನ್ನು ಮತ್ತು ಗೃಹಿಣಿಯನ್ನು ನಿಯಂತ್ರಿಸುವವನು ಅವನೇ ಆಗಿದ್ದಾನೆ. ಗೃಹಕ್ಕೆ ಜೀವಂತಿಕೆಯನ್ನು ನೀಡಿದ ಗೃಹಿಣಿಗೆ, ಜೀವಂತಿಕೆಯೇ ಇಲ್ಲದೆ ನಿಯಂತ್ರಣಕ್ಕೊಳಪಟ್ಟು ಬಾಳು ಬದುಕುತ್ತಿರುತ್ತಾಳೆ. ಈ ಗೃಹಿಣಿತ್ವದ ಕಲ್ಪನೆಯು ಇಂದು, ನಿನ್ನೆಯದಲ್ಲ. ಅದು ಹಿಂದೂಧರ್ಮ ಮತ್ತು ಸಂಸ್ಥೆಗಳು ಯಾವಾಗ ಹುಟ್ಟಿಕೊಂಡವೊ ಆವಾಗಲೇ ಹೆಣ್ಣಿಗೆ ಸಾಂಪ್ರದಾಯಿಕ ಸಂಬಂಧಗಳಲ್ಲಿ ಕಟ್ಟಿಡುವ ಪ್ರಯತ್ನಗಳು ಪ್ರಾರಂಭವಾದವು.

"ಔದ್ಯೋಗಿಕ ಸಂಸ್ಕೃತಿಗಿಂತಲೂ ಸಂಸ್ಕೃತಿಯೇ ಜನಪದ ಸಾಹಿತ್ಯದಲ್ಲಿ ಪ್ರಧಾನ ಸ್ಥಾನ ಪಡೆಯಿತು. ಸಂಸ್ಕೃತಿಯನ್ನು ನಂಬಿಕೊಂಡು ಬದುಕುವ ಮನುಷ್ಯನಿಗೆ ಕೆಲವು ಮೌಲ್ಯಗಳು ಬೇಕಾದವು. ಅವನ ಸುಖ, ಶಾಂತಿ, ನೆಮ್ಮದಿಯಿಂದ ಬದುಕಬೇಕಾದರೆ ಶೀಲ, ಪಾತಿವ್ರತ್ಯ, ನೀತಿಯಂತಹ ಸಾಮಾಜಿಕ ಮೌಲ್ಯಗಳ ಜೊತೆಯಲ್ಲಿ ಪ್ರೀತಿ, ತ್ಯಾಗ ಸಹನೆಯಂತಹ ಮಾನವೀಯ ಮೌಲ್ಯಗಳನ್ನು ಸ್ವೀಕರಿಸಬೇಕಾಯಿತು. ಗಂಡನಿಗೆ ಹೆಂಡತಿ, ಮಕ್ಕಳಿಗೆ ತಾಯಿ, ಸೊಸೆಗೆ ಅತ್ತೆ ಮತ್ತು ಅತ್ತಿಗೆ ಸೊಸೆಯಾಗಿ ಬದುಕುವ ಅವಳಿಗೆ ಪುರುಷ ಪ್ರಧಾನ ವ್ಯವಸ್ಥೆಯ ಮೌಲ್ಯಗಳು ಪ್ರಶ್ನಾತೀತವಾಗಿವೆ."[೧೨]

ಈ ಸಾಂಪ್ರದಾಯಿಕ ಸಂಬಂಧಗಳು ಪುರುಷ ಮತ್ತು ಮಹಿಳೆ ಇಬ್ಬರಿಗೂ ಅನ್ವಯವಾಗಿದ್ದರು ಪುರುಷನಿಗೆ ಈ ಸಂಬಂಧಗಳು ಆಯ್ಕೆಯಾಗಿರುತ್ತವೆ ಹೊರತು ಅನಿವಾರ್ಯವಾಗಿರುವುದಿಲ್ಲ.

ಉದಾ. ಹೊಸದಾಗಿ ಮದುವೆಯಾದ ನವದಂಪತಿಗಳಲ್ಲಿ ಗಂಡಿಗೆ ಆತನ ಹೆಂಡತಿಯೊಂದಿಗೆ ಯಾವುದೋ ಕಾರಣದಿಂದಾಗಿ ಬಾಳ್ವೆ ಮಾಡುವುದು ಕಷ್ಟವೆನಿಸಿದಾಗ, ಅವನು ಆ ಸಂಬಂಧದಿಂದ ಪಲಾಯನ ಮಾಡಿ ಒಂದು ಸಂಬಂಧವನ್ನು ನಿರಾಕರಣೆ ಮಾಡುವ ಆಯ್ಕೆ ಅವನಿಗಿರುತ್ತದೆ. ಅಂತಹ ಉದಾಹರಣೆಗಳು ಕೂಡ ದೊರೆಯುತ್ತವೆ. ಆದರೆ ಅದೇ ಮಹಿಳೆಯ ವಿಷಯಕ್ಕೆ ಬಂದಾಗ ಅದು ಆಯ್ಕೆಯಾಗಿರುವುದಿಲ್ಲ. ಅವಳಿಗೆ ಆ ಸಂಬಂಧದಿಂದ ಎಷ್ಟು ಹಿಂಸೆಯಾಗುತ್ತಿದ್ದರು, ಮರುಮಾತನಾಡದೆ 'ಪತಿಯೇ ಪರದೈವ' ಎಂದು ಆ ಸಂಬಂಧವನ್ನು ನಿಭಾಯಿಸಿಕೊಂಡು ಹೋಗಬೇಕಾಗುತ್ತದೆ. ಒಂದು ವೇಳೆ ನಿರಾಕರಿಸಿದರೆ ಅಂತಹ ಮಹಿಳೆಯನ್ನು ಸಮಾಜ ನೋಡುವ ದೃಷ್ಟಿಕೋನವೇ ಬೇರೆಯಾಗಿರುತ್ತದೆ. ಇಂತಹ ಪರಿಸ್ಥಿತಿಯಲ್ಲಿ ಮಹಿಳೆ ಅನಿವಾರ್ಯವಾದರೂ ಆ ಸಂಬಂಧವನ್ನು ನಿಭಾಯಿಸಿಕೊಂಡು ಹೋಗಲೇ ಬೇಕಾಗುತ್ತದೆ. ಪುರುಷ ಹೆಣ್ಣನ್ನು ತನ್ನ ಅಂಕೆಯಲ್ಲಿರಿಸಿಕೊಳ್ಳಲು ಸಾಂಪ್ರದಾಯಗಳನ್ನು, ನಂಬಿಕೆಗಳನ್ನು ಮುಂದೇ ಮಾಡಿದ್ದಾನೆ. ಅದಕ್ಕೆ ಜನಪದದ ಒಗಟುಗಳು, ಗಾದೆಗಳು ಕೂಡ ಹೊರತಾಗಿಲ್ಲ.

"ಮಜ್ಜಿಗೆಯಲ್ಲಿದ್ದ ಬೆಣ್ಣೆ ಕೆಡುವುದಿಲ್ಲ ಅಂಕೆಯಲ್ಲಿದ್ದ ಹೆಣ್ಣು ಕೆಡುವುದಿಲ್ಲ"[೨೨]

ಹೀಗೆ ಮಹಿಳೆಯನ್ನು ಕೌಟುಂಬಿಕ ಸೌಖ್ಯದ ಬಗ್ಗೆ ಅದರ ಸೋಲು ಗೆಲುವಿನ ಬಗ್ಗೆ ಪುರುಷನಿಗಿಂತಲೂ ಹೆಣ್ಣಿನ ಜವಾಬ್ದಾರಿಯೇ ಹೆಚ್ಚಾಗಿರುತ್ತದೆ ಮತ್ತು ಹೆಣ್ಣಿಗೆ ಸ್ವತಂತ್ರವನ್ನು ಕೊಡುವ ಬದಲು ಆಕೆಯನ್ನು ಅಂಕೆಯಲ್ಲಿಟ್ಟುಕೊಳ್ಳಬೇಕು ಎಂಬ ನೀತಿ ಸನಾತನ ಕಾಲದಿಂದಲೂ ನಡೆಯುತ್ತಲೇ ಬರುತ್ತಿದೆ.

"ಹೆಣ್ಣು ಪ್ರಕೃತಿಯಾಗಿ ಪರಿಗಣಿಸಲ್ಪಟ್ಟಿದ್ದರಿಂದ ಅವಳು ಅದನ್ನು ದಾಟಿ ಸಂಸ್ಕೃತಿ ನೆಲೆಗೆ ಬರಕೂಡದು. ಹೆಣ್ಣಿನ ಬದುಕು ಗೃಹ ಚೌಕಟ್ಟಿಗೆ ಸೀಮಿತವಾಗಿದೆ. ಹೊಲದೊಳಗಿನ ಆಕೆಯ ದುಡಿಮೆಯನ್ನು ಮನೆಯ ಬದುಕಿನ ಪರಿಧಿಯೊಳಗೆ ಎಳೆದು ತರಲಾಗಿದೆ. ಬಾಹ್ಯಸಂಪರ್ಕದ ಅವಶ್ಯಕತೆ ಹೆಣ್ಣಿಗೆ ಇಲ್ಲ. ಹಾಗೂ ಅದು ಅವಳ ಬದುಕಿನ ಕ್ರಮಕ್ಕೆ ಹೊಂದುವಂತದ್ದಲ್ಲ ಯಾವಾಗ ಬಾಹ್ಯಸಂಪರ್ಕದಂತಹ ಪ್ರಕ್ರಿಯೆಗೆ ಒಳಗಾಗುವಳು ಆಗ ಪರಿಶುದ್ಧತೆಯನ್ನು ಕಳೆದುಕೊಳ್ಳುವಳು. ಅವಳು ಪರಿಶುದ್ಧಳಾಗಿರಬೇಕಾದರೆ ಸಾಂಪ್ರದಾಯಿಕ ಗೃಹಚೌಕಟ್ಟಿನೊಳಗೆ ಇರಬೇಕು"[೨೩] ಎಂದು ಹೇಳಲಾಗಿದೆ.

### ೩.೩.೩ ಹೊನ್ನಮ್ಮನ ಸಾಂಪ್ರದಾಯಿಕ ಗೃಹಿಣಿತ್ವದ ಮಾದರಿ

೧೭ನೇಯ ಶತಮಾನದಲ್ಲಿ ಹೊನ್ನಮ್ಮ 'ಹದಿಬದಿಯ ಧರ್ಮ'ವನ್ನು ರಚಿಸಿದಳು. ಚಿಕ್ಕದೇವರಾಯನ ಆಸ್ಥಾನದಲ್ಲಿ ಸಂಚಿಯಾಳಿಯಾದ ಹೊನ್ನಮ್ಮ ರಾಜ ಮತ್ತು ರಾಣಿಯ ಕೃಪೆಯಿಂದ ಅಕ್ಷರ ಕಲಿತವಳು "ಹದಿಬದೆಯ ಧರ್ಮಕ್ಕೆ 'ಸ್ತ್ರೀಧರ್ಮ ಸಾಂಗತ್ಯ' ಎಂಬ ಪರ್ಯಾಯ ನಾಮವೂ ಹಸ್ತಪ್ರತಿಗಳಲ್ಲಿದೆ. ಆ ಕಾಲಕ್ಕೆ ಹೆಣ್ಣಿನ ಧರ್ಮ ಎಂದು ಶಾಸ್ತ್ರಕಾರರು ಏನೇನು ವಿಧಿಸಿದ್ದರು ಅದನ್ನು ಈ ಕೃತಿಯಲ್ಲಿ ನಿರೂಪಿಸಲಾಗಿದೆ."[೮೫]

"ಹೊನ್ನಮ್ಮ ಹದಿಬದೆಯರ ಧರ್ಮವನ್ನು ಒಂಬತ್ತು ಸಂಧಿಗಳಲ್ಲಿ ಪ್ರಸ್ತುತ ಪಡಿಸಿದ್ದಾಳೆ. ಆರಂಭದ ಸಂಧಿಯಲ್ಲಿ ಸ್ವವಿಚಾರ, ರಾಜಸ್ಥಾನ, ಗುರು ಮೊದಲಾದ ಸಂಗತಿಗಳಿದ್ದರೆ, ಎರಡನೆಯ ಸಂಧಿಯು ಪಾತಿವ್ರತ್ಯದ ಮಹಿಮೆಯನ್ನು ನಿರೂಪಿಸಲು ಮೀಸಲಾಗಿದೆ. ಪತಿ ಶುಶ್ರೂಷೆಯ ಬಗ್ಗೆ ಮೂರನೆಯ ಸಂಧಿಯು ತಿಳಿಸುತ್ತದೆ. ನಾಲ್ಕನೆಯ ಸಂಧಿಯಲ್ಲಿ ಹೆಣ್ಣಾದವಳು ಅತ್ತೆಮಾವ ನೆರೆಯವರು ಮೊದಲಾದವರೊಂದಿಗೆ ಹೇಗೆ ಗೌರವದಿಂದ ವ್ಯವಹರಿಸಬೇಕೆಂಬುದರ ವಿವರಣೆಯಿದೆ. ಐದನೆಯ ಸಂಧಿ ಸ್ತ್ರೀವಾದಿ ದೃಷ್ಟಿಯಿಂದ ಹಾಗೂ ಕವಯಿತ್ರಿಯ ಧ್ಯೇಯ ಧೋರಣೆಗಳ ದೃಷ್ಟಿಯಿಂದ ಬಹುಮುಖ್ಯವಾದುದು. ಇಲ್ಲಿ ಹೆಣ್ಣುಮಕ್ಕಳ ಬಗ್ಗೆ ತಂದೆ-ತಾಯಿಗಳು ತೋರಬೇಕಾದ ಕಾಳಜಿಗಳೇನೆಂದು ಹೇಳಲಾಗಿದೆ. ಆರು ಮತ್ತು ಏಳನೆ ಸಂಧಿಗಳಲ್ಲಿ ಕ್ರಮವಾಗಿ ದಾಂಪತ್ಯಜೀವನ ಹಾಗೂ ಪಾತಿವ್ರತ್ಯಕ್ಕಿರುವ ತಪಶ್ಶಕ್ತಿಯನ್ನು ಸತಿಯ ವಿರಹವನ್ನು ನಿರೂಪಿಸಲಾಗಿದೆ. ಎಂಟನೆಯ ಸಂಧಿಯೂ ಗೃಹಿಣಿಯ ಕರ್ತವ್ಯಗಳನ್ನು ತಿಳಿಸುತ್ತದೆ. ಒಂಬತ್ತನೆಯ ಸಂಧಿಯಲ್ಲಿ ಭಗವಂತನ ನಾಮಸ್ಮರಣೆಯಿಂದ ಮುಕ್ತಿ ದೊರಕುವುದೆಂದು ಸಂದೇಶವಿದೆ."[೮೬]

ಹೊನ್ನಮ್ಮ ತನ್ನ ಕಾಲಘಟ್ಟದಲ್ಲಿ ಹೆಣ್ಣಿಗೆ ಶೀಲ, ಪಾವಿತ್ರ್ಯ ಮತ್ತು ಗೃಹಿಣಿತ್ವದ ಕುರಿತು ತನ್ನ ಹದಿಬದೆಯ ಧರ್ಮದಲ್ಲಿ ಪ್ರಸ್ತಾಪಿಸುತ್ತಾ ಹೋಗುತ್ತಾಳೆ. ಹೆಣ್ಣಿಗೆ ಪತಿಯಸೇವೆ, ಪತಿನಿಷ್ಠೆ ಮುಖ್ಯವಾಗಿರುತ್ತದೆ ಅದೇ ರೀತಿಯಾಗಿ ಗೃಹಿಣಿತ್ವವೂ ಕೂಡ. ಈ ಮೌಲ್ಯಗಳು ಪುರುಷ ಪ್ರಧಾನ ವ್ಯವಸ್ಥೆಯೂ ಕಟ್ಟಿಕೊಟ್ಟಿರುವ ಸಾಂಪ್ರದಾಯಿಕ ಮೌಲ್ಯಗಳೇ ಆಗಿದ್ದು ಈ ಮೌಲ್ಯಗಳ ಪರವಾಗಿ ಹೊನ್ನಮ್ಮಳು ಕೂಡ ಹೇಳಿದ್ದಾಳೆ. ಹೊನ್ನಮ್ಮ ಇದ್ದ ಕಾಲಘಟ್ಟವನ್ನು ಗಮನಿಸಿದರೆ ಅವಳು ರಚಿಸಿದ ಹದಿಬದೆಯ ಧರ್ಮದಲ್ಲಿ ಸ್ಪಷ್ಟವಾಗಿ ಹೇಳುವ ಅಂಶಗಳು, ಹೆಣ್ಣಿಗೆ ಪಾವಿತ್ರ್ಯ, ಶೀಲ, ಗೃಹಿಣಿತ್ವ, ಪತಿಸೇವೆ, ಅತ್ತೆಮಾವರ ಸೇವೆ, ದೇವರ ಸೇವೆ ಇವೇ ಮೊದಲಾದವುಗಳು ಹೆಣ್ಣಿಗೆ ಭೂಷಣ ವಿದ್ದಂತೆ ಎನ್ನುತ್ತಾಳೆ. ಹೆಣ್ಣು ಮನೆಯ ಹೊಸ್ತಿಲು ದಾಟದೇ, ಮನೆಯ ಗೃಹಕೃತ್ಯದಲ್ಲೇ ತನ್ನನ್ನು ತೊಡಗಿಸಿಕೊಂಡು, ಪತಿಸೇವೆ, ಅತ್ತೆ ಮಾವರ ಸೇವೆಯಿಂದಲೇ ಸ್ವರ್ಗವನ್ನು ಪಡೆಯಬೇಕು, ಇಂತಹ ಸೇವೆಯನ್ನು ಮಾಡುವ ಹೆಣ್ಣಿಗೆ ಮಾತ್ರ ಸ್ವರ್ಗ ದೊರೆಯುತ್ತದೆಂದು ಹೊನ್ನಮ್ಮಳು ತನ್ನ ಧರ್ಮದಲ್ಲಿ ಹೇಳಿಕೊಂಡಿದ್ದಾಳೆ. ಹೊನ್ನಮ್ಮಳ ಧರ್ಮವನ್ನು ಓದಿದಾಗ ಅವಳು ಅಂದಿನ ಕಾಲಘಟ್ಟದಲ್ಲಿರುವ

ಮೌಲ್ಯಗಳನ್ನು ಎತ್ತಿಹಿಡಿದು ಪುರುಷಪ್ರಧಾನ ವ್ಯವಸ್ಥೆಗೆ ಪೂರಕವಾಗಿಯೇ ಬರೆದಿದ್ದಾಳೆ. ಇದರಿಂದಾಗಿಯೇ ಅವಳ ಧರ್ಮವು ಪುರುಷರಿಂದ ಮೆಚ್ಚುಗೆಯನ್ನು ಪಡೆದಿದೆ, ಇಲ್ಲಿ ವ್ಯವಸ್ಥೆಯು ಅತ್ಯಂತ ಜಾಣಬುದ್ಧಿಯನ್ನು ಪ್ರದರ್ಶಿಸಿದೆ. ಈ ಧರ್ಮ ಒಂದು ವೇಳೆ ಪುರುಷನಿಂದ ರಚನೆಯಾಗಿದ್ದರೆ ಅದಕ್ಕೆ ಹೊನ್ನಮ್ಮನಿಗೆ ನೀಡಿದಷ್ಟು ಮಹತ್ವ ಬರುತ್ತಿರಲಿಲ್ಲವೇನೊ. ತನ್ನ ಶ್ರೇಷ್ಠತೆಯನ್ನು ತಲೆತಲಾಂತರದಿಂದ ಹಿಡಿದು ಮುಂದಿನ ಪೀಳಿಗೆಯವರೆಗೂ ಮುಂದುವರಿಯಲಿ ಎಂದು ಜಾಣ್ಮೆಯಿಂದ ಹೊನ್ನಮ್ಮನ ಮೂಲಕ ರಚಿಸಿ ತನ್ನ ಕುಶಾಗ್ರ ಬುದ್ಧಿಯನ್ನು ವ್ಯಕ್ತಪಡಿಸಿತು. ಪುರುಷರು ಶ್ರೇಷ್ಠ ಮಹಿಳೆಯರು ಕನಿಷ್ಠ ಅವರೆನಿದ್ದರೂ ಮನೆಯನ್ನು ನೋಡಿಕೊಂಡು ಹೋಗುವವರು ಮಾತ್ರ ಎಂಬ ಧೋರಣೆಯನ್ನು ಹೊಂದಿರುವಂತಹ ವ್ಯವಸ್ಥೆಯಿರುವಾಗ ಹೊನ್ನಮ್ಮ ಧರ್ಮ ರಚಿಸಿರುವುದು ಹೆಣ್ಣಿನ ಕುಲಕ್ಕೆ ಹೆಮ್ಮೆಯ ವಿಷಯವಾದರೂ, ಹೆಣ್ಣಿನ ಸಾರ್ಥಕತೆ, ಸ್ವರ್ಗ ಎಂಬ ಕಲ್ಪನೆಗೆ ಹೊನ್ನಮ್ಮಳು ಕೂಡ, ಭಕ್ತಿ ಸೇವೆ, ಶೀಲ, ಪಾತಿವ್ರತ್ಯ, ಗೃಹಿಣಿತ್ವ ಪಾಲನೇ ಶ್ರೇಷ್ಠವೆಂದು ಮತ್ತೆ ಹೆಣ್ಣಿನ ಅಧಿನತೆಗೆ ತಳ್ಳುವ ಧರ್ಮ ಇದಾಗಿರುವುದು ಅಸಮಾಧಾನದ ವಿಷಯವಾಗಿದೆ.

"ಹೊನ್ನಮ್ಮಳು ತನ್ನ 'ಹದಿಬದೆಯ ಧರ್ಮ'ದಲ್ಲಿ ಹೆಣ್ಣಿನ ಪಾತಿವ್ರತ್ಯ, ಗೃಹಿಣಿತ್ವಕ್ಕೆ ನೀಡಿದ ಮಹತ್ವ ಕಾಣಸಿಗುತ್ತದೆ. ಹೆಣ್ಣಿನ ಜ್ಞಾನ, ತಿಳುವಳಿಕೆ ಬುದ್ಧಿವಂತಿಕೆಯನ್ನು ಗುರುತಿಸುವುದನ್ನು ಮರೆತವರು ಗಂಡಿನ ಗೆಲವು ಜ್ಞಾನದಿಂದಾದರೆ ಸ್ತ್ರೀಯ ಗೆಲವು ಮಾತ್ರ ಪತಿನಿಷ್ಠೆಯಿಂದಾಗಿ ಎಂದು ವ್ಯಾಖ್ಯಾನ ಮಾಡಲಾಗಿದೆ."[೨] ಶೀಲ, ಪಾತಿವ್ರತ್ಯದ ಹೆಸರಿನಲ್ಲಿ ಹೆಣ್ಣು ಪ್ರಧಾನ ಧಾರೆಗೆ ಬರದೇ, ಪುರುಷ ಪ್ರಧಾನ ವ್ಯವಸ್ಥೆಯ ನಿಯಂತ್ರಕರಾಗಿರುವ ಪುರುಷನ ಅಧೀನದಲ್ಲಿದ್ದು, ದ್ವಿತೀಯ ದರ್ಜೆಯ ಸ್ಥಾನವನ್ನು ಪಡೆಯುವಂತೆ ವ್ಯವಸ್ಥೆ ಮಾಡಿದೆ.

ಹೆಣ್ಣಿನ ಕಥನವೆಂದರೆ ಅದು ದ್ವಿತೀಯದರ್ಜೆಯದೇ ಆಗಿದೆ. ಸಮಾಜ ಪ್ರತಿಯೊಂದು ಹಂತದಲ್ಲಿಯೂ ಮಹಿಳೆಯನ್ನು ದ್ವಿತೀಯ ದರ್ಜೆಯಲ್ಲಿ ಮತ್ತು ಪುರುಷನನ್ನು ಪ್ರಥಮದರ್ಜೆಯಲ್ಲಿಟ್ಟುಕೊಂಡೇ ಬಂದಿರುವುದು ಕಂಡು ಬರುತ್ತದೆ. ಹೆಣ್ಣು ದ್ವಿತೀಯ ದರ್ಜೆಯವಳಾಗಿರುವುದರಿಂದಲೇ ಅವಳ ಅಭಿಪ್ರಾಯಗಳಿಗೆ ಪುರುಷನ ಅಭಿಪ್ರಾಯಗಳಿಗೆ ನೀಡಿದಷ್ಟು ಮಹತ್ವ ನೀಡುವುದಿಲ್ಲ. ಅವಳನ್ನು ಸಾರ್ವಜನಿಕ ವಲಯದ ಉದ್ಯೋಗಿಯಾಗಿ ನೋಡುವುದರ ಜೊತೆ ಜೊತೆಗೆ ಅವಳನ್ನು ಸಾಂಪ್ರದಾಯಿಕವಾಗಿ ನಡೆದುಬಂದಂತಹ ಗೃಹಿಣಿತ್ವವನ್ನು ಕೂಡ ನಿಭಾಯಿಸಿಕೊಂಡು ಹೋಗಬೇಕೆನ್ನುವ ಧೋರಣೆ ಇದೆ.

ಸಂಪ್ರದಾಯಗಳು, ಆಚರಣೆಗಳು, ನಂಬಿಕೆಗಳು ಹೆಣ್ಣನ್ನು ಆಳುತ್ತಲೇ ಬರುತ್ತಿವೆ. ದೇವರು-ದೆವ್ವ, ಪಾಪ-ಪುಣ್ಯ, ಸ್ವರ್ಗ-ನರಕ ಎಂಬ ಕಲ್ಪನೆಯು ಹೆಣ್ಣಿನ ಮನೋಲೋಕವನ್ನು ಸಂಪೂರ್ಣವಾಗಿ ತಮ್ಮ ಹಿಡಿತದಲ್ಲಿರಿಸಿಕೊಂಡು ಆಳ್ವಿಕೆ ಮಾಡುತ್ತಲೇ ಬರುತ್ತವೆ. ಯಾವುದೇ ಹಬ್ಬ ಹರಿದಿನಗಳಾಗಲಿ, ವ್ರತಗಳಾಗಲಿ ಬಿಡದಂತೆ ಪಾಲಿಸಿಕೊಂಡು ಬರುವಂತೆ ಈ ವ್ಯವಸ್ಥೆ ರೂಪಿಸಿದೆ.

## ೩.೪ ಕೊಳಚೆ ಪ್ರದೇಶದ ಮಹಿಳಾ ಸಾಮಾಜಿಕತೆ

ಕೊಳಚೆ ಪ್ರದೇಶವೆಂದರೆ ಅದು ಸಮಸ್ಯೆಗಳ ಕೂಪ. ಅಲ್ಲಿ ಒಂದು ಸಮಸ್ಯೆಗೆ ಪರಿಹಾರ ದೊರೆಯುತ್ತಿದೆ ಎನ್ನುವಷ್ಟರಲ್ಲಿಯೇ ಹಲವಾರು ಸಮಸ್ಯೆಗಳು ಧುತ್ತೆಂದು ಪ್ರತ್ಯಕ್ಷವಾಗುತ್ತವೆ. ಸದಾ ಒಂದಿಲ್ಲೊಂದು ಸಮಸ್ಯೆಗಳನ್ನು ಎದುರಿಸುವ ಈ ಪ್ರದೇಶದ ಸ್ತ್ರೀ-ಪುರುಷರೂ ಕೂಡ ಸಾಮಾಜಿಕತೆಯ ತಾರತಮ್ಯಕ್ಕೆ ಒಳಗಾದವರೇ ಆಗಿದ್ದಾರೆ. ಸಾಮಾನ್ಯವಾಗಿ ಈ ಪ್ರದೇಶದಲ್ಲಿ ವಾಸಿಸುವ ಜನರು ಶಿಕ್ಷಣದಿಂದ ವಂಚಿತರಾಗಿರುವ, ಅಶಿಕ್ಷಿತರಾಗಿ, ನೈತಿಕತೆಯು, ಇಲ್ಲದ ಬದುಕು ಬದುಕುತ್ತಿರುತ್ತಾರೆ. ಗೊತ್ತು ಗುರಿಯಿಲ್ಲದ ಜೀವನ ಇವರದಾಗಿರುತ್ತದೆ. ಅಂದಿನ ದುಡಿಮೆಯ ಕೂಲಿಯನ್ನು ಅಂದೇ ಖರ್ಚು ಮಾಡುವ ಸ್ಥಿತಿಯು ಅವರ ಡೋಲಾಯಮಾನವಾದ ಬದುಕಿನ ಕನ್ನಡಿಯಾಗಿದೆ. ಅವರ ಭವಿಷ್ಯ ಅಭದ್ರತೆಯಿಂದ ಕೂಡಿದ್ದಾಗಿದೆ. ಮಹಿಳೆ ಮತ್ತು ಪುರುಷ ಇಬ್ಬರು ದುಡಿಮೆ ಮಾಡಿದರೂ ಗಂಡಿನ ಶ್ರಮಕ್ಕೆ, ದುಡಿಮೆಗೆ ಸಿಗುವ ಮಹತ್ವ ಹೆಣ್ಣಿನ ದುಡಿಮೆಗೆ, ಶ್ರಮಕ್ಕೆ ಸಿಗುವುದಿಲ್ಲ. ಹೆಣ್ಣಿನ ಸ್ಥಾನಮಾನದಲ್ಲಿ ಯಾವುದೇ ಬದಲಾವಣೆಯು ಆಗುವುದಿಲ್ಲ. ಅವಳು ಮತ್ತೆ ಮನೆಯ ನಾಲ್ಕು ಗೋಡೆಗಳಿಗೆ ಸೀಮಿತಳಾಗಿ, ಗೃಹವಾರ್ತೆಯನ್ನು ನೋಡಿಕೊಂಡು ಹೋಗುವುದು ತಪ್ಪುವುದಿಲ್ಲ. ಅವಳು ಸ್ವತಂತ್ರವಾಗಿ ನಿರ್ಣಯ ತೆಗೆದುಕೊಳ್ಳುವಂತಿಲ್ಲ. ಸ್ವತಂತ್ರವಾಗಿ ಮಾತನಾಡುವಂತಿಲ್ಲ, ಖರ್ಚು ಮಾಡುವಂತಿಲ್ಲ, ಸದಾ ಗಂಡನ ಬಯಕೆಗಳನ್ನು ತೀರಿಸುತ್ತಾ ಅವನ ಅಧೀನಕ್ಕೆ ಒಳಗಾಗಿರಬೇಕಾಗುತ್ತದೆ. ಇಲ್ಲದಿದ್ದರೆ ಹೊಡೆತ, ಅವಾಚ್ಯ ಶಬ್ದಗಳಿಂದ ನಿಂದನೆ ಮಾಡುವುದು ಕೊನೆ ಮೊದಲಿಲ್ಲದ ಯಾತನಾಮಯವಾದ ಬದುಕು ಬದುಕುತ್ತಿರುತ್ತಾಳೆ. ಹೆಣ್ಣು ಗಂಡಿನ ಭೋಗದ ವಸ್ತುವಾಗಿ, ಆತನ ಮಕ್ಕಳನ್ನು ಹೆರುವ ಯಂತ್ರವಾಗಿ ಉಳಿದ ಸದಸ್ಯರ ಬೇಕು-ಬೇಡಗಳಿಗೆ ಸ್ಪಂದಿಸುವ, ಅವರ ಸೇವೆಯನ್ನು ಮಾಡುವ ಸೇವಕಿಯಾಗಿ ದುಡಿಯುತ್ತಾಳೆ. ಈ ಪ್ರದೇಶದ ಪುರುಷರು ಅಶಿಕ್ಷಿತರಾಗಿರುವುದರಿಂದ ತಮ್ಮ ಮನೆಯಲ್ಲಿ ಹೆಂಡತಿ ಏನಾದರೂ ಹೆಚ್ಚಿಗೆ ಮಾತನಾಡಿದರೆ, ಎದುರು ವಾದಿಸಿದರೆ, ಮಾನಸಿಕ, ದೈಹಿಕ ಹಿಂಸೆ ನೀಡುವುದು, ಶೀಲಶಂಕೆ, ಅಪಮಾನ ಮಾಡುವುದು ನಿತ್ಯ ಜೀವನದ ಸಾಮಾನ್ಯವಾದ ಸಂಗತಿಯಾಗಿರುತ್ತದೆ. ಇಂತಹ ಯಾತನಾಮಯವಾದ ಬದುಕಿಗೆ ಹೊಂದಿಕೊಂಡೇ ಹೋಗುವ ಅನಿವಾರ್ಯ ಈ ಪ್ರದೇಶದ ಮಹಿಳೆಯದಾಗಿರುತ್ತದೆ. ಮೇಲ್ವರ್ಗದ ಮಹಿಳೆಯರಾದರೆ ಸಾಮಾಜಿಕ ಸಂವಹನದಿಂದಾಗಿ ಅಲ್ಪ ಸ್ವಲ್ಪ ಹೊರಬರಬಹುದು. ದುಡಿಮೆ ಎಂದು ನಾಲ್ಕು ಜನರೊಂದಿಗೆ ಬೆರೆತಾಗ, ತಮ್ಮ ಜೀವನಕ್ಕೂ ಬೇರೊಬ್ಬರ ಜೀವನಕ್ಕೂ ಇರುವ ವ್ಯತ್ಯಾಸವನ್ನು ಗ್ರಹಿಸಬಹುದು. ತಮಗಿಂತಲೂ ಉತ್ತಮರೆನಿಸಿಕೊಂಡು ಜೀವನ ನಡೆಸುವವರಂತೆ ತಾವೂ ಜೀವನ ನಡೆಸಲು ಪ್ರಯತ್ನಪಡಬಹುದು, ಕುಟುಂಬದಲ್ಲಿ ತಮ್ಮ ಸ್ಥಾನಮಾನವನ್ನು ಕಂಡುಕೊಳ್ಳಬಹುದು. ಆದರೆ ಅದೇ ಕೊಳಚೆ ಪ್ರದೇಶದ ಮಹಿಳೆಯರು ತಮ್ಮ ಬದುಕನ್ನು ರೂಪಿಸಿಕೊಂಡು ಹೋಗಲು ದೂರವೇ ಉಳಿದಿರುತ್ತಾರೆ. ಅವರ ಜೀವನದ ಜಂಜಾಟಗಳಿಂದ ಹೊರಗೆ ಬರಲು ಸಾಧ್ಯವೇ ಇಲ್ಲ. ತಾವೂ ಕೂಡ ಒಳ್ಳೆಯ ಬದುಕು ಕಟ್ಟಿಕೊಂಡು ಬಾಳಬೇಕೆಂಬ ಕನಸು ಕನಸಾಗಿಯೇ ಉಳಿಯುತ್ತದೆ.

## ೩.೫ ಕೊಳಚೆ ಪ್ರದೇಶದ ಮಹಿಳೆಯರ ಸಾಂಪ್ರದಾಯಿಕ ಗೃಹಿಣಿತ್ವ

ಸಂಪ್ರದಾಯಗಳು, ನಂಬಿಕೆಗಳು, ಆಚರಣೆಗಳು ಕೇವಲ ಮೇಲ್ವರ್ಗದ ಮಹಿಳೆಯರಿಗೆ ಮಾತ್ರ ಸೀಮಿತವಾಗಿರದೇ ಅವುಗಳನ್ನು ಪಾಲಿಸಿಕೊಂಡು ಬರುವಲ್ಲಿ ಈ ಕೊಳಚೆ ಪ್ರದೇಶದ ಮಹಿಳೆಯರು ಕೂಡ ಪ್ರಮುಖ ಪಾತ್ರವಹಿಸುತ್ತಾರೆ. ಅದರಂತೆಯೇ ಕೆಳವರ್ಗದ ಮಹಿಳೆಯರು ಹಬ್ಬ-ಹರಿದಿನಗಳಲ್ಲಿ ಅತ್ಯಂತ ಕಟ್ಟುನಿಟ್ಟಾದ ನಿಯಮಗಳನ್ನು ಪಾಲಿಸುತ್ತಾ, ಮಡಿ-ಮೈಲಿಗೆಗೆ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಡುತ್ತಾರೆ. "ಶ್ರಾವಣಮಾಸದ ದಿನಗಳಲ್ಲಿ ಕೆಳವರ್ಗದ ಮಹಿಳೆಯರು ಮನೆಯನ್ನು ಸ್ವಚ್ಛಮಾಡಿ ಬಟ್ಟೆ, ಪಾತ್ರೆಗಳನ್ನೆಲ್ಲ ತೊಳೆಯುತ್ತಾರೆ. ಈ ತಿಂಗಳು ಕೆಳಜಾತಿಯ ಗಂಡಸರು ಕುಡಿಯುವುದಿಲ್ಲ, ಮಾಂಸ ತಿನ್ನುವುದಿಲ್ಲ, ಗಂಡ ಹೆಂಡತಿ ಒಂದೇ ಹಾಸಿಗೆ ಮೇಲೆ ಮಲಗುವುದಿಲ್ಲ, ಮೈಗೆ ಮೈ ಕೂಡಿದರೆ ಮೈಲಿಗೆ ಅನ್ನುವುದು."[೨೮] ಇವರ ನಂಬಿಕೆ.

ಕೊಳಚೆ ಪ್ರದೇಶದಲ್ಲಿ ವಾಸಿಸುವ ಜನರು ಸಾಮಾನ್ಯವಾಗಿ ಸಾಮಾಜಿಕ ಸ್ತರದ ವರ್ಗೀಕರಣದಲ್ಲಿ ಅತ್ಯಂತ ಕೆಳಜಾತಿಗೆ ಸೇರಿದವರು, ವಾಸಿಸುತ್ತಿರುತ್ತಾರೆ. ಈ ಪ್ರದೇಶದ ಜನರು ಅನೇಕ ಮೂಲಭೂತ ಸೌಕರ್ಯಗಳಿಂದ ವಂಚಿತವಾಗಿರುವಂತೆ, ಶಿಕ್ಷಣದಿಂದಲೂ ಕೂಡ ವಂಚಿತರಾಗಿರುತ್ತಾರೆ. ತಮ್ಮ ತೋಳುಬಲದ ಮೇಲೆಯೇ ತುತ್ತಿನ ಚೀಲವನ್ನು ತುಂಬಿಸಿಕೊಳ್ಳುವ ಮಹಿಳೆ ಮತ್ತು ಪುರುಷರು ನಗರದ ಒಂದು ಸಮುದಾಯದವರಾದರೆ, ಇನ್ನೊಂದು ಸಮುದಾಯದವರಾಗಿ ಮೇಲ್ವರ್ಗದ, ಶಿಕ್ಷಿತರಾಗಿರುವಂತಹ, ದುಡಿಯುವ ಮಹಿಳೆಯರನ್ನು ಮತ್ತು ಪುರುಷರನ್ನು ಕಾಣುತ್ತೇವೆ. ಈ ಮಹಿಳೆಯರು ದುಡಿಮೆಯೊಂದಿಗೆ ಮನೆಯ ಗೃಹಿಣಿತ್ವವನ್ನು ಕೂಡ ನಿಭಾಯಿಸಿಕೊಂಡು ಹೋಗಬೇಕಾಗುತ್ತದೆ. ತಾನು ಹೊರಗಡೆ ದುಡಿದು, ದಣಿದು, ಕೆಲಸದ ಒತ್ತಡಗಳನ್ನು ಹೊತ್ತುಕೊಂಡು ಮನೆಗೆ ಬಂದರೆ, ತನ್ನ ದಣಿವನ್ನೆಲ್ಲ ಮರೆತು, ಇನ್ನೊಂದು ಪಾತ್ರವನ್ನು ನಿರ್ವಹಿಸಲು ಸಿದ್ಧವಾಗಿರಬೇಕಾಗುತ್ತದೆ. ಈ ಮಹಿಳೆಯರಿಗೆ ಕೆಲಸದಿಂದ ಬಿಡುವು ದೊರೆಯುವುದೇ ಇಲ್ಲ ಮನೆಯ ಕೆಲಸ ಪೂರ್ಣಗೊಳಿಸಿದ ನಂತರ ಮತ್ತೆ ದುಡಿಮೆಯ ಕೆಲಸವನ್ನು ನಿಭಾಯಿಸಬೇಕು, ದುಡಿಯುವ ಮಹಿಳೆಯಾದರೂ ಮನೆಯ ಯಜಮಾನ ಮಾತ್ರ ಪುರುಷನೇ ಆಗಿರುತ್ತಾನೆ. ದುಡಿಯುವ ಮಹಿಳೆ ಎಂದು ಆಕೆಯ ಸ್ಥಾನಮಾನಗಳಲ್ಲಿ ಸ್ವಲ್ಪ ಪ್ರಮಾಣದಲ್ಲಿ ಬದಲಾವಣೆಗಳಾಗಬಹುದು. ಆದರೆ ದುಡಿಯುವ ಮಹಿಳೆ ಮನೆಯ ಈ ಜವಾಬ್ದಾರಿಯಿಂದ ಮುಖ ತಿರುಚುವಂತೆ ಇಲ್ಲ. ಇದು ಒಂದು ಸಮುದಾಯದ ಗೃಹಿಣಿತ್ವದ ಪಾಲನೆಯಾದರೆ, ಕೊಳಚೆ ಪ್ರದೇಶಗಳ ಮಹಿಳೆಯರ ಗೃಹಿಣಿತ್ವದ ಪಾಲನೆ ಕೂಡ ಅಷ್ಟೆ ಪ್ರಮುಖವಾಗಿದೆ. ಈ ಮಹಿಳೆಯರು ದಿನಂಪ್ರತಿ ಬೆಳಿಗ್ಗೆ ಬೇಗ ಎದ್ದು ಮನೆಯ ಎಲ್ಲ ಕೆಲಸ ಕಾರ್ಯಗಳನ್ನು ಲಗುಬಗೆಯಿಂದ ಮುಗಿಸಿಕೊಂಡು, ದುಡಿಯಲು ತೆರಳುತ್ತಾರೆ. ಬಿಸಿಲು, ಮಳೆ, ಚಳಿ, ಎನ್ನದೇ ದುಡಿಯಲು ನಿಲ್ಲುತ್ತಾರೆ. ಬಿಡುವು ಎನ್ನುವ ಮಾತೆ ಇರುವುದಿಲ್ಲ. ಹೊರಗೆ ದುಡಿದು ಮನೆಗೆ ಬಂದಾಗಲೂ ದುಡಿಯಬೇಕು, ಗಂಡನ ಬಯಕೆಗಳನ್ನು ಪೂರೈಸಬೇಕು, ಒಂದು ವೇಳೆ ಯಾವುದರಲ್ಲಾದರೂ ಕೊರತೆ ಕಂಡುಬಂದರೆ ಗಂಡನಿಂದ ಹೊಡೆತ, ಬಡಿತ

ತೀರ ಆಕ್ರಮಣಕಾರಿಯಾದ ಸ್ಥಿತಿ, ವಿಚ್ಛೇದನ, ವೈವಾಹಿಕ ಸಂಬಂಧವನ್ನು ಕೊನೆಗಾಣಿಸುವಲ್ಲಿ ಪುರುಷರು ಮುಂದಾಗಿರುತ್ತಾರೆ. ಒಬ್ಬಳನ್ನು ಬಿಟ್ಟು ಇನ್ನೊಬ್ಬಳೊಂದಿಗೆ ಸಂಸಾರವನ್ನು ನಡೆಸಲು ಕೂಡ ತಯಾರಾಗಿರುತ್ತಾರೆ. ಇವರು ಅಶಿಕ್ಷಿತ ಜನರಾಗಿರುವುದರಿಂದ ತಮ್ಮ ಹೆಂಡತಿಯನ್ನು ಮಾನಸಿಕ, ದೈಹಿಕ ಹಿಂಸೆಗೆ ಗುರಿಪಡಿಸುವುದು, ಅವಾಚ್ಯ ಶಬ್ದಗಳಿಂದ ನಿಂದಿಸುವುದು ನಡೆದೆ ಇರುತ್ತದೆ. ಮತ್ತು ಹೆಂಡತಿಯ ಮೇಲೆ ತನ್ನ ಸಂಪೂರ್ಣವಾದ ಅಧಿಕಾರವನ್ನು ನಡೆಸುವಂತಹ ಗಂಡಂದಿರಿಗೆ ಇಲ್ಲಿ ಕೊರತೆ ಇಲ್ಲ.

## ೩.೬ ಗುಲಬರ್ಗಾ ಕೊಳಚೆ ಪ್ರದೇಶಗಳ ಮಹಿಳೆಯರ ಸಾಮಾಜಿಕ ಸ್ಥಿತಿ-ಗತಿಗಳು

ಕೊಳಚೆ ಪ್ರದೇಶಗಳು, ನಗರಗಳು ಬೆಳೆದಂತೆಲ್ಲಾ ಬೃಹದಾಕಾರವಾಗಿ ಬೆಳೆಯುತ್ತಿವೆ. ಅಂತೆಯೇ ಇಲ್ಲಿ ವಾಸಿಸಲು ಯೋಗ್ಯವಾದ ವಾತಾವರಣವಿರದ ಕಾರಣ ದಿನನಿತ್ಯದ ಹೊಡೆದಾಟಗಳು, ಜಗಳಗಳು, ಒಬ್ಬರು ಮತ್ತೊಬ್ಬರ ವಿರುದ್ಧ ಕತ್ತಿಮಸೆಯುವ ಘಟನೆಗಳು ನಡೆಯುತ್ತಲೇ ಇರುತ್ತವೆ. ಇಲ್ಲಿರುವ ಅಶಾಂತಿಯುತವಾದ ವಾತಾವರಣವಿರುವುದರಿಂದ ಜನರಿಗೆ ನೆಮ್ಮದಿಯಿರುವುದಿಲ್ಲ, ಗಂಡ ಹೆಂಡತಿಯ ಮಧ್ಯೆ ಜಗಳ, ಅಕ್ಕ ಪಕ್ಕದವರೊಂದಿಗೆ ಜಗಳ, ಕುಡಿದ ಅಮಲಿನಲ್ಲಿ ತೂರಾಡಿಕೊಂಡು ಜಗಳವಾಡುವ ಪುರುಷರು, ಇಂತಹ ವಾತಾವರಣದಲ್ಲಿ ಬೆಳೆಯುವ ಮಕ್ಕಳ ಮೇಲೆ ಗಂಭೀರವಾದ ಪರಿಣಾಮ ಬೀರುತ್ತವೆ. ಮಕ್ಕಳು ಬಾಲ್ಯದಲ್ಲಿಯೇ ಅನೇಕ ಅನೈತಿಕ ವ್ಯವಹಾರಗಳಿಗೆ, ಕೆಲಸಗಳಿಗೆ ಒಳಗಾಗುತ್ತಾರೆ. ಈ ಪ್ರದೇಶದಲ್ಲಿ ವಾಸಿಸುವ ಮಕ್ಕಳ ಭವಿಷ್ಯ ಡೋಲಾಯಮಾನವಾಗಿರುತ್ತದೆ, ಅವರು ಭವಿಷ್ಯತ್ತಿನಲ್ಲಿ ಒಳ್ಳೆಯ ನಾಗರಿಕರಾಗುವ ಸಾಧ್ಯತೆಗಳು ಕಡಿಮೆ, ಚಿಕ್ಕವಯಸ್ಸಿನಲ್ಲಿಯೇ ಬುದ್ಧಿವಾದವನ್ನು ಹೇಳಬೇಕಾದ ತಂದೆ ತಾಯಿಗಳು ಕುಡಿದುಕೊಂಡು ಬೀದಿಯಲ್ಲಿ ಜಗಳ ಕಾಯುತ್ತ, ಒಬ್ಬರನ್ನೊಬ್ಬರು ಹೊಡೆದಾಡಿಕೊಳ್ಳುತ್ತಾ ಇರುತ್ತಾರೆ. ಇಂತಹ ಪರಿಸರದಲ್ಲಿ ಬೆಳೆದ ಮಕ್ಕಳ ಭವಿಷ್ಯ ಅಂಧಕಾರವೇ ಸರಿ. ಇಂತಹ ಭವಿಷ್ಯವನ್ನು ಹೊತ್ತುಕೊಂಡೇ ಜೀವನ ನಡೆಸುವಂತಾಗಿದೆ.

ಕೊಳಚೆ ಪ್ರದೇಶಗಳ ಮಹಿಳೆಯರ ಬದುಕು ತುಂಬಾ ಶೋಚನೀಯವಾದುದಾಗಿದೆ. ಈ ಮಹಿಳೆಯರು ಎದುರಿಸುವ ಕೊನೆ ಮೊದಲಿಲ್ಲದ ಸಮಸ್ಯೆಗಳಿಗೆ ಕೊರತೆ ಇಲ್ಲ. ಇವರು ಎದುರಿಸುವ ಸಮಸ್ಯೆಗಳು ಅನೇಕ. ಈ ಮಹಿಳೆಯರಿಗೆ ಇರುವ ಸಮಸ್ಯೆಗಳು ಬೇರೊಂದು ವರ್ಗದ ಮಹಿಳೆಯರು ಎದುರಿಸಲಿಕ್ಕಿಲ್ಲ, ಇವರ ಮುಂದೆ, ಹಸಿವಿನ ಪ್ರಶ್ನೆಯಿದೆ, ಬಡತನದ ಪ್ರಶ್ನೆಯಿದೆ, ದುಡಿದು ತಂದುಹಾಕಿದರೂ ಮತ್ತೆ ನಾಳೆಗೆ ಎನ್ನುವ ಪ್ರಶ್ನೆ, ಕುಡಿತದೊಂದಿಗೆ ಅವನನ್ನು ಕಟ್ಟಿಕೊಂಡೇ ಸಂಸಾರವನ್ನು ನಡೆಸಬೇಕು ಎಷ್ಟೇ ಕಷ್ಟ ಬಂದರೂ ತನ್ನ ಗಂಡನಿಂದ ಬೇರ್ಪಡುವಂತಿಲ್ಲ, ಒಂದು ವೇಳೆ ಗಂಡನನ್ನು ತೊರೆದು ಬದುಕುತ್ತೇನೆಂಬ ವಿಶ್ವಾಸವಿದ್ದರೂ ಸಮಾಜ ಅವಳನ್ನು ಒಂಟಿಯಾಗಿ, ಸ್ವತಂತ್ರವಾಗಿ ಬದುಕಲು ಬಿಡುವುದಿಲ್ಲ. ಗಂಡಬಿಟ್ಟವಳನ್ನು ನೋಡುವ ದೃಷ್ಟಿಯೇ ಬೇರೆಯಾಗುತ್ತದೆ. ಗಂಡನ ಹೊಡೆತಕ್ಕಿಂತಲೂ ಜನಗಳ ಈ ದೃಷ್ಟಿಕೋನ ಸಹಿಸಲಸಾಧ್ಯ, ಎಲ್ಲೊ ಕೆಲವೊಬ್ಬ ಮಹಿಳೆಯರು ಮಾತ್ರ ದಿಟ್ಟ ಧೈರ್ಯವನ್ನು ತೋರಿಸಿ ಗಂಡನನ್ನು ಬಿಟ್ಟು ಬದುಕುತ್ತಾರೆ. ಉಳಿದಂತೆ ಗಂಡಿನ

ರಕ್ಷಣೆಯಲ್ಲಿ ಹೆಣ್ಣಿಗೆ ಸುಖ, ಸ್ವರ್ಗವಿದೆ ಎನ್ನುವ ಪೂರ್ವಾಗ್ರಹವಿಟ್ಟುಕೊಂಡಂತಹ ಜನರನ್ನು, ಸಮಾಜವನ್ನು ಎದುರಿಸುವ ಪ್ರಶ್ನೆ ಅವಳ ಮುಂದಿದೆ. ಗಂಡನಿಂದ ದಿನವು ಹೊಡೆತ ಬಡಿತ, ಹಿಂಸೆಯನ್ನು ಅನುಭವಿಸಿ ಮತ್ತೆ ಬೆಳಿಗ್ಗೆ ದುಡಿಯಲು ತೆರಳುವ ಮಹಿಳೆಯ ಮುಂದೆ ಇವೆಲ್ಲ ಪ್ರಶ್ನೆಗಳಿವೆ. ಈ ಪ್ರಶ್ನೆಗಳು ಮೇಲ್ವರ್ಗದ, ಮಧ್ಯಮವರ್ಗದ ಮಹಿಳೆಯರಿಗೆ ಎದುರಾಗುವ ಸಂಭವಗಳು ವಿರಳ.

**ಸಾಮಾಜಿಕ ಸ್ಥಿತಿ ಗತಿಗಳು**

ಕೊಳಚೆ ಪ್ರದೇಶದ ಮಹಿಳೆಯರ ಸಾಮಾಜಿಕ ಬದುಕು ತೀರಾ ಅತಂತ್ರವಾಗಿ, ಹದಗೆಟ್ಟು ಹೋಗಿರುತ್ತದೆ. ಇಲ್ಲಿರುವ ಮಹಿಳೆಯರು ಅನೇಕ ಸಮಸ್ಯೆಗಳ ಜೊತೆಗೆ ಜೀವನ ನಡೆಸುತ್ತಿರುತ್ತಾರೆ, ಮನೆಯ ಸಂಪೂರ್ಣ ಜವಾಬ್ದಾರಿ ಇವರ ಮೇಲೆಯೇ ಇದೆ. ಮಹಿಳೆಯರು ತಮ್ಮ ಗಂಡಂದಿರಿಂದ ಮಾನಸಿಕ, ದೈಹಿಕ ಹಿಂಸೆಯನ್ನು ಅನುಭವಿಸುತ್ತಾ, ಗಂಡಂದಿರೊಂದಿಗೆ ಜಗಳವಾಡುವುದರಿಂದ, ಸಿಟ್ಟು, ಸಿಡುಕು, ಮುಂಗೋಪಿಗಳಾಗಿ ಬಿಡುತ್ತಾರೆ, ಇವರಿಗೆ ತಮ್ಮ ಅಶಾಂತಿಯ ಬದುಕಿನಿಂದ ನೆಮ್ಮದಿ ಸಿಗುವುದೇ ಇಲ್ಲ, ದಿನವೂ ಕುಡಿದು ಬಂದು ಹೊಡೆಯುವುದು, ಅವಾಚ್ಯ ಶಬ್ದಗಳಿಂದ ನಿಂದಿಸುವುದು, ಶೀಲ ಶಂಕೆ ಮಾಡುವುದು, ಇವುಗಳು ದಿನನಿತ್ಯವೂ ನಡೆಯುತ್ತಿರುತ್ತವೆ. ಮಹಿಳೆಯರಿಗೆ ಸ್ವತಂತ್ರವಾಗಿ ಯೋಚಿಸುವ ಅಧಿಕಾರವಿಲ್ಲ. ಗಂಡನಾದವನು ನೀಡುವ ಮಾನಸಿಕ, ದೈಹಿಕ ಹಿಂಸೆಯನ್ನು ಸಹಿಸಿಕೊಳ್ಳುತ್ತಲೇ ಜೀವನ ನಡೆಸುತ್ತಿರುತ್ತಾರೆ.

ಅಸಂಘಟಿತ ವಲಯದಲ್ಲಿ ದುಡಿಯುವ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ವಾಸಿಸುವ ಈ ಪ್ರದೇಶಗಳಲ್ಲಿ, ಮಹಿಳೆಯರು ತಮ್ಮ ಬದುಕಿನುದ್ದಕ್ಕೂ ಕೀಳರಿಮೆಯನ್ನು ರೂಢಿಸಿಕೊಂಡೇ ಬದುಕುತ್ತಿರುತ್ತಾರೆ. ಈ ಪ್ರದೇಶದ ಮಹಿಳೆಯರು ಬಡಾವಣೆಗಳಲ್ಲಿ, ವ್ಯವಸ್ಥಿತವಾದ ಮನೆಗಳಲ್ಲಿ ವಾಸಿಸುವ, ಐಶಾರಾಮದ ಜೀವನವನ್ನು ನಡೆಸುವ ಮಹಿಳೆಯರೊಂದಿಗೆ ತಮ್ಮನ್ನು ಹೋಲಿಕೆ ಮಾಡಿಕೊಂಡು, ತಮ್ಮ ಅಂದಿನ ಬದುಕಿಗೆ ಕೊರಗುತ್ತಾ, ತಾವು ಈ ಬಡಾವಣೆಯಲ್ಲಿರುವ ಮಹಿಳೆಯರಿಗೆ ಅಧೀನರಾಗಿ, ಅವರ ಸೇವೆಯನ್ನು ಮಾಡಿಕೊಳ್ಳುತ್ತಲೇ ಬದುಕುವ ಮಹಿಳೆಯರಿಗೆ ತಮ್ಮ ಅಧೀನ ಬದುಕಿನೆಡೆಗೆ ಕೀಳರಿಮೆ ಹುಟ್ಟಿಕೊಂಡು ಬಿಡುತ್ತದೆ. ಇದೇ ಕೀಳರಿಮೆಯು ಅವಳ ಮನೋಲೋಕದ ಮೇಲೆ ಕೆಟ್ಟ ಪ್ರಭಾವವನ್ನು ಬೀರುತ್ತದೆ. ಈ ಕೀಳರಿಮೆಯನ್ನು ನುಂಗಿಕೊಂಡೇ ಬದುಕುತ್ತಾರೆ. ಪ್ರತಿಯೊಂದು ಕುಟುಂಬದಲ್ಲಿ ನಿತ್ಯವೂ ಜಗಳಗಳು, ಹೊಡೆದಾಟ, ನಿಂದನೆ, ವಿವಾಹ ವಿಚ್ಛೇದನ, ಹೆಂಡತಿ ಇನ್ನೊಬ್ಬರೊಂದಿಗೆ ಅನೈತಿಕ ವ್ಯವಹಾರದಲ್ಲಿ ತೊಡಗಿಕೊಂಡಿದ್ದಾಳೆಂದು ಗಂಡ ದೂಷಿಸಿದರೆ, ತನ್ನ ಗಂಡ ಇನ್ನೊಬ್ಬಳೊಂದಿಗೆ ಸಂಸಾರ ನಡೆಸುತ್ತಿದ್ದಾನೆಂದು ಹೆಂಡತಿ ದೂಷಿಸುತ್ತಾಳೆ, ಇವೆಲ್ಲವೂ ಸಾಮಾನ್ಯವೆಂಬಂತೆ ಈ ಜನರು ಬದುಕುತ್ತಿರುತ್ತಾರೆ. ದುಡಿಯುವ ಹೆಂಡತಿಯಾದರಂತೂ ಗಂಡನಿಂದ ಶೀಲಶಂಕೆಗೊಳಪಡುತ್ತಾಳೆ. ಒಳ್ಳೆಯ ಬಟ್ಟೆ ಧರಿಸುವಂತಿಲ್ಲ, ಸ್ವಚ್ಛತೆಯಿಂದ ಇರುವ

ಹಾಗೂ ಇಲ್ಲ, ಒಳ್ಳೆಯ ಬಟ್ಟೆಗಳನ್ನು ಹಾಕಿಕೊಂಡು, ಅಲಂಕಾರ ಮಾಡಿಕೊಂಡು ಹೊರಟರೆ ಗಂಡನ ಅನುಮಾನದ ಕಣ್ಣುಗಳು, ಅವಳ ಬೆನ್ನ ಹಿಂದೆ ಹೋಗುತ್ತವೆ. ಇಲ್ಲ ಸಲ್ಲದ ಆರೋಪಗಳನ್ನು ಎದುರಿಸಬೇಕಾಗುತ್ತದೆ. ತನ್ನ ಹೆಂಡತಿ ಕೆಟ್ಟವಳೆಂದೂ ಆಕೆ ಚಾರಿತ್ರ್ಯ ಹೀನಳೆಂದೂ ಅವಳನ್ನು ಅವಮಾನ ಮಾಡುವ ಪುರುಷರು ಕಾಣ ಸಿಗುತ್ತಾರೆ. ಇಂತಹ ಜನರಿಗೆ ತಮ್ಮ ಹೆಂಡತಿ ಸರಿಯಾಗಿದ್ದರೂ ತಪ್ಪಾಗಿ ಕಾಣಿಸುತ್ತಾಳೆ. ಕೆಲವೊಂದು ಸಂದರ್ಭಗಳಲ್ಲಿ ಅನೈತಿಕ ಚಟುವಟಿಕೆಗಳಲ್ಲಿ ಭಾಗಿಯಾಗಿರುತ್ತಾರೆ. ಈ ಚಟುವಟಿಕೆಗಳಲ್ಲಿ ಭಾಗಿಯಾಗಿರುವುದಕ್ಕೆ ಆರ್ಥಿಕ ದುಃಸ್ಥಿತಿಯು ಪ್ರಮುಖ ಕಾರಣವಾಗಿದೆ. ಸುಳ್ಳು, ವಂಚನೆ, ಕೂಡ ಸಾಮಾನ್ಯವಾಗಿ ಕಂಡುಬರುತ್ತವೆ. ಅನೇಕ ದುರ್ನಡತೆಗಳಲ್ಲಿ ಮಕ್ಕಳು ಭಾಗಿಯಾಗಿ ರುವುದು ಕಂಡುಬರುತ್ತದೆ.

ಕೊಳಚೆ ಪ್ರದೇಶದಲ್ಲಿರುವ ಮಹಿಳೆಯರು ಎಲ್ಲ ಸಮಸ್ಯೆಗಳಿಗೂ ಮೊದಲು ಬಲಿಪಶುವಾಗಿದ್ದಾರೆ, ಉದ್ಯೋಗ ಇರಬಹುದು, ಬಡತನವಿರಬಹುದು, ಆರೋಗ್ಯದ ಸಮಸ್ಯೆಗಳಾಗಿರಬಹುದು, ಶಿಕ್ಷಣ ಇರಬಹುದು ಹೀಗೆ ಯಾವುದೇ ವಿಷಯದಲ್ಲಿಯೂ ಮೊದಲ ಬಲಿಪಶು ಅವಳಾಗಿರುವುದರಿಂದ, ಅನೇಕ ಮಾನಸಿಕ ಹೊಯ್ದಾಟಗಳಿಗೆ, ಒತ್ತಡಗಳಿಗೆ, ಸಿಲುಕಿ ಮಾನಸಿಕ ಅಸ್ವಸ್ಥೆಯಾಗಿರುವ, ಉದಾಹರಣೆಗಳು ಕಾಣಸಿಗುತ್ತವೆ. ಇಂತಹ ಅಶಾಂತಿಯ ವಾತಾವರಣದಲ್ಲಿ ದಿನವೂ ಎದುರಿಸುವ ಕಷ್ಟಗಳು, ಅವಿರತವಾದ, ಬಿಡುವಿಲ್ಲದ ದುಡಿಮೆಯಿಂದ ಮಾನಸಿಕರೋಗಿಯಾಗಿ ಬಿಡುತ್ತಾಳೆ. "ದೆವ್ವ ಬಂದಂತೆ, ಮೈಮೇಲೆ ದೇವರು ಬಂದಂತೆ ನಟನೆ ಮಾಡುತ್ತಾರೆ." ಈ ರೀತಿಯಾಗಿ ನಟನೆ ಮಾಡಲು ಅವರು ಮಾನಸಿಕವಾಗಿ ಕುಗ್ಗಿ ಹೋಗಿರುವುದು, ಗಂಡನಿಂದಾಗುವ ದೈಹಿಕ, ಮಾನಸಿಕ ಹಿಂಸೆ, ಕೀಳರಿಮೆ, ಅಭದ್ರತೆ, ನೆಮ್ಮದಿಯಿಲ್ಲದ, ಸದಾ ಸಮಸ್ಯೆಗಳನ್ನೇ ಎದುರಿಸುವ ಮಹಿಳೆಯರು ಇವರಾಗಿರುತ್ತಾರೆ. ಅವಳ ಸಮಸ್ಯೆಗಳಿಗೆ ಪರಿಹಾರವಾಗಿ, ಕುಡಿತದ ಚಟಕ್ಕೆ ಬಲಿಯಾಗಿರುತ್ತಾರೆ. ಈ ಕೊಳಚೆ ಪ್ರದೇಶಗಳಲ್ಲಿ ಹೆಣ್ಣು, ಗಂಡು ಇಬ್ಬರೂ ಸಮಸ್ಯೆಗಳ ಬಂಧನದಿಂದ ಸ್ವಲ್ಪ ಮುಕ್ತಿಯನ್ನು ಪಡೆಯಲು ಕುಡಿತದ ಚಟಕ್ಕೆ ಬಲಿಯಾಗಿರುವುದು ಸಾಮಾನ್ಯವಾಗಿದೆ.

ದೇವರನ್ನು ನಂಬುವ ಜನರು ದೇವರ ಹೆಸರಿನಲ್ಲಿ ಜೋಗತಿಯನ್ನು, ಬಸವಿಯನ್ನು ಬಿಡುತ್ತಾರೆ. ಈ ಮಹಿಳೆಯರೆಲ್ಲರ ವಾಸ ಈ ಪ್ರದೇಶವೇ ಆಗಿದೆ. ಇವರುಗಳು ಅನೇಕ ಅನೈತಿಕ ಚಟುವಟಿಕೆಗಳಲ್ಲಿ ಭಾಗಿಯಾಗಿರುವುದು ಕಂಡು ಬರುತ್ತದೆ. ದೇವರ ಹೆಸರಿನಲ್ಲಿ ಅನೈತಿಕ ವ್ಯವಹಾರಗಳನ್ನು ನಡೆಸಿಕೊಂಡು ಬರುವವರು ಉದಾಹರಣೆಗೆ ದೊರೆಯುತ್ತಾರೆ. ಕೊಳಚೆ ಪ್ರದೇಶಗಳು ನಗರಗಳಿಗೆ ಕಪ್ಪು ಚುಕ್ಕೆ ಇದ್ದಂತೆ ಆಗಿವೆ. ಈ ನಗರಗಳಲ್ಲಿ ವಾಸಿಸುವ ಮಹಿಳೆಯರು ಹೆಚ್ಚಾಗಿ ಅಸಂಘಟಿತ ವಲಯದ ಉದ್ಯೋಗಗಳನ್ನು ಮಾಡುವವರೇ ಆಗಿರುವುದರಿಂದ ಇವರ ಸಾಮಾಜಿಕ ಬದುಕು ಸಹ ವಿಚಿತ್ರವಾಗಿದೆ. ಸಮಾಜದ ಎಲ್ಲ ಅನುಕೂಲತೆಗಳಿಂದ ವಂಚಿತರಾಗಿರುವ ಇವರು, ಕೀಳರಿಮೆ, ಜಾತಿ, ವಿದ್ಯೆ, ಆಸ್ತಿ ಅಂತಸ್ತು, ನಡವಳಿಕೆಯಿಂದಾಗಿ ಇವರು ಇತರರೊಂದಿಗೆ ಬದುಕುವವರಾಗಿರುತ್ತಾರೆ ವಿನಹ ಸಾಮಾಜಿಕ ಸ್ಥಾನಮಾನ

ಇವರಿಗೆ ಇಲ್ಲ. ಇದು ಸಮಾಜ ಮತ್ತು ಶ್ರೀಮಂತರ ಬಗ್ಗೆ ದ್ವೇಷ, ತಿರಸ್ಕಾರಕ್ಕೆ ಎಡೆಮಾಡಿಕೊಡುತ್ತದೆ. ಹೆಜ್ಜೆ ಹೆಜ್ಜೆಗೂ ಕೀಳರಿಮೆಯಿಂದ ಮಾನಸಿಕ ಹೊಯ್ದಾಟಗಳು ನಡೆದೇ ಇರುತ್ತವೆ. ಇವರು ವಾಸಿಸುವ ಪ್ರದೇಶಗಳು ಕೂಡ ಇವರ ಸ್ಥಾನ ಮಾನಗಳಿಗೆ ಕಾರಣವಾಗಿವೆ.

**ಟಿಪ್ಪಣಿಗಳು**

೧. ರಹಮತ ತರಿಕೇರಿ (ಸಂ) : ಹೆಣ್ಣು : ಧರ್ಮ ವಿಶ್ವಕೋಶ ೩, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೦, ಪುಟ ೪೯೪

೨. ಜ್ಯೋತಿಶಶಿಕುಮಾರ : ಮಹಿಳಾ ಸಾಮಾಜಿಕತೆ : ಮ.ಅ.ಕೇಂದ್ರ ಕ.ವಿ.ವಿ., ಹಂಪಿ ೨೦೦೭, ಪುಟ ೨೯

೩. 'ಅದೇ'

೪. ಶ್ರೀಮತಿ ಎಚ್.ಎಸ್. : ಹೆಣ್ಣು ಹೆಂಗಸು : ಬಾಲ್ಯದಕೆರೆ ಪ್ರಕಾಶನ ಮಂಡ್ಯ, ೨೦೦೪, ಪುಟ ೫೭

೫. ಸೋಮಣ್ಣ ಜೆ. (ಸಂ) : ಅಂಬೇಡ್ಕರ್ ಮತ್ತು ಸಾಮಾಜಿಕ ನ್ಯಾಯ : ಪುಟ ೭೪

೬. ಮೈತ್ರೇಯಿ ಮುಖ್ಯೊಪಾಧ್ಯಾಯ : ಬೆಳ್ಳಿಯ ಸಂಕೋಲೆಗಳು : (ಅನು) ವೈದೇಹಿ, ಅಕ್ಷರ ಪ್ರಕಾಶನ, ಸಾಗರ, ೧೯೮೫, ಪುಟ ೨೨

೭. ಶಾಂತಾ ಇಮ್ರಾಪೂರ : ಮಹಿಳೆ ಸಾಹಿತ್ಯ ಸಂಸ್ಕೃತಿ : ಚೇತನಾ ಪ್ರಕಾಶನ, ಧಾರಾವಡ, ೨೦೦೧, ಪುಟ ೩೦

೮. ಅದೇ, ಪುಟ ೩೨

೯. ಅನುಸೂಯಾಕಾಂಬಳೆ (ಸಂ) : ವಿಚಾರ ಸಾಹಿತ್ಯ ಮತ್ತು ಹೆಣ್ಣು : ವೈಚಾರಿಕ ಸಾಹಿತ್ಯ ಪ್ರಕಾಶನ, ಬೆಳಗಾವಿ, ೧೯೯೯, ಪುಟ ೨೨

೧೦. ಶಾಂತಾ ಇಮ್ರಾಪೂರ : ಧರ್ಮ-ಮಹಿಳೆ ಮತ್ತು ಸಮಾಜ : ಚೇತನಾ ಪ್ರಕಾಶನ, ಧಾರವಾಡ, ೨೦೦೧ ಪುಟ ೧೭೧

೧೧. ಸುನಂದಮ್ಮ ಆರ್. : ಮಹಿಳಾ ಸಂಸ್ಕೃತಿ : ಸಮತಾ ಅಧ್ಯಯನ ಕೇಂದ್ರ, ಮೈಸೂರು, ೨೦೦೫, ಪುಟ ೫೦

೧೨. ವಿಜಯಶ್ರೀ ಸಬರದ : ಜಾನಪದ ಮತ್ತು ಮಹಿಳೆ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೬, ಪುಟ ೧

೧೩. ಅದೇ, ಪುಟ ೩

೧೪. ಶ್ರೀಮತಿ ಎಚ್.ಎಸ್. (ಸಂ) : ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ : ಕ.ವಿ.ವಿ., ಹಂಪಿ, ೨೦೦೬, ಪುಟ ೫೨೩

೧೫. ಅದೇ, ಪುಟ ೧೭೪

೧೬. ಅದೇ, ಪುಟ ೧೭೫

೧೭. ಸುನಂದಮ್ಮ ಆರ್. : ಮಹಿಳಾ ಸಂಸ್ಕೃತಿ : ಸಮತಾ ಅಧ್ಯಯನ ಕೇಂದ್ರ, ಮೈಸೂರು, ೨೦೦೫, ಪುಟ ೫೬

೧೮. ಗೀತಾನಾಗಭೂಷಣ : ಕಾಗೆಮುಟ್ಟಿತು : ಪುಟ ೫

ಅಧ್ಯಾಯ : ನಾಲ್ಕು

# ಕೊಳಚೆ ಪ್ರದೇಶದ ಮಹಿಳಾ ಬದುಕಿನ ಶೈಕ್ಷಣಿಕ, ಆರೋಗ್ಯಕ ಮತ್ತು ಆರ್ಥಿಕ ಸ್ಥಿತಿ-ಗತಿಗಳು

## ಅಧ್ಯಾಯ : ನಾಲ್ಕು

# ಕೊಳಚೆ ಪ್ರದೇಶದ ಮಹಿಳಾ ಬದುಕಿನ ಶೈಕ್ಷಣಿಕ, ಆರೋಗ್ಯಕ ಮತ್ತು ಆರ್ಥಿಕ ಸ್ಥಿತಿ-ಗತಿಗಳು

### ೪.೧ ಪೀಠಿಕೆ

ಒಂದು ದೇಶದ ಅಭಿವೃದ್ಧಿಯಾಗಬೇಕಾದರೆ ಅಲ್ಲಿರುವಂತಹ ಮಹಿಳೆಯರು ಸಮನಾಗಿ ಆರ್ಥಿಕ ವಲಯದಲ್ಲಿ ತೊಡಗಿಕೊಳ್ಳಬೇಕು, ದುಡಿಮೆಯವಲಯಕ್ಕೆ ಬರಬೇಕು ಅಂದಾಗ ಆ ದೇಶ ಪ್ರಗತಿಯತ್ತ ಸಾಗುತ್ತದೆ. ಆದರೆ ವಿಪರ್ಯಾಸದ ಸಂಗತಿಯೆಂದರೆ, ದುಡಿಮೆಯ ವಲಯದಲ್ಲಿ ಕೇವಲ ಪುರುಷ ದುಡಿಮೆಗಾರನು ಮಾತ್ರ ಕಾಣಸಿಗುತ್ತಾನೆ, ಮಹಿಳಾ ದುಡಿಮೆಗಾರರಿಗೆ ಅವಕಾಶಗಳು ಕಡಿಮೆಯಿರುವುದರಿಂದ ಅವರ ಭಾಗವಹಿಸುವಿಕೆಯ ಪ್ರಮಾಣವು ಕಡಿಮೆಯಿದೆ. ಪುರುಷನು ನಿರ್ವಹಿಸುವ ದುಡಿಮೆಯನ್ನು ಶ್ರೇಷ್ಠವೆಂದು ಉತ್ಪಾದನೆಯ ಮೌಲ್ಯ ಹೊಂದಿದ್ದಾನೆಂದು ನಿರ್ವಚಿಸಿ, ಅವನ ದುಡಿಮೆಗೆ ಮೌಲ್ಯ ಒದಗಿಸಲಾಗಿದೆ. ಆದರೆ ಮಹಿಳೆಯರು ನಿರ್ವಹಿಸಿಕೊಂಡು ಹೋಗುವ ದುಡಿಮೆಗಳಿಗೆ ಮೌಲ್ಯವಿಲ್ಲ, ಅದು ಗೃಹಕೃತ್ಯವಾಗಿರಬಹುದು ಅಥವಾ ಮರುಉತ್ಪಾದನಾ ಕ್ರಿಯೆಯಾಗಿರಬಹುದು, ಇವುಗಳಿಗೆ ಉತ್ಪಾದಕತೆಯ ಮೌಲ್ಯವಿಲ್ಲ, ಮಹಿಳೆಯ ಈ ಜೈವಿಕ ವ್ಯತ್ಯಾಸದಿಂದ ಮತ್ತು ನೈಸರ್ಗಿಕ ಕ್ರಿಯೆಯಾದ ಮರು ಉತ್ಪಾದನೆಯು ಮೌಲ್ಯವಿಲ್ಲದಂತಾಗಿ ಪುರುಷ ದುಡಿಮೆಗಾರರಿಗಿಂತಲೂ ಕನಿಷ್ಠ ಎಂದು ಪರಿಗಣಿಸಲಾಗುತ್ತಿದೆ.

ಮಹಿಳೆಯ ದುಡಿಮೆಯನ್ನು ಉತ್ಪಾದಕ ಮೌಲ್ಯವೆಂದು ಗುರಿತಿಸಬೇಕು. ಅವಳ ಮರುಉತ್ಪಾದನಾ ಸಾಮರ್ಥ್ಯವನ್ನು ಅಲಕ್ಷಿಸದೇ ಮೌಲ್ಯೀಕರಿಸಬೇಕೆಂದು ಅನೇಕ ಸ್ತ್ರೀವಾದಿಗಳು ಒತ್ತಿ ಹೇಳುತ್ತಾರೆ. ದೈಹಿಕವಾಗಿ ಪ್ರಬಲನೆನಿಸಿಕೊಂಡಿರುವ, ಉತ್ಪಾದನಾ ಸಾಮರ್ಥ್ಯವನ್ನು ಹೊಂದಿದಂತಹ ಪುರುಷನು ಮನೆಯ ಯಾವುದೇ ಕೆಲಸವನ್ನು ಮಾಡುವುದಿಲ್ಲ, ಅವನದು ಏನಿದ್ದರೂ ಹೊರಗೆ ಹೋಗಿ ದುಡಿದು ತರುವುದು ಮಾತ್ರ. ಈ ಪುರುಷ ಪ್ರಧಾನ ವ್ಯವಸ್ಥೆಯು ಗಂಡಿನ ಕೆಲಸವನ್ನು ಮಾನ್ಯ ಮಾಡುತ್ತದೆ. ಹೆಣ್ಣಿನ ದುಡಿಮೆಗೆ ಅನುತ್ಪಾದಕವೆಂದು ಕೈಬಿಡುತ್ತದೆ. 'ದುಡಿಮೆಗಾರ' ಎಂಬ ಶಬ್ದದಲ್ಲಿಯೂ ಪುರುಷ ಸೂಚಿಯಾಗಿರುವುದನ್ನು ಸ್ತ್ರೀವಾದಿಗಳು ಗುರುತಿಸಿ ಪ್ರಶ್ನಿಸುತ್ತಾರೆ. ಮಹಿಳೆಯರು ಕೂಡ ದುಡಿಯುತ್ತಾರೆ, ಅವರ ದುಡಿಮೆಗೂ ಮೌಲ್ಯ ಮಾಡಬೇಕೆಂದು ಸ್ತ್ರೀವಾದಿಗಳು ವಾದಿಸುತ್ತಾರೆ. ಪುರುಷನ ಜೊತೆ ಜೊತೆಯಾಗಿ ದುಡಿಯುವ ಮಹಿಳೆ

ತಾರತಮ್ಯಕ್ಕೆ ಒಳಗಾಗುತ್ತಾಳೆ. ಅದು ಶ್ರಮ ಆಗಿರಬಹುದು, ಇಲ್ಲವೇ ಕೂಲಿಯಾಗಿರಬಹುದು ಎರಡರಲ್ಲಿಯೂ ತಾರತಮ್ಯವಿದೆ. ಶ್ರಮದ ವಿಷಯಕ್ಕೆ ಬಂದಾಗ ಪುರುಷ ಮತ್ತು ಮಹಿಳೆಯರ ಮಧ್ಯೆ ಶ್ರಮವಿಭಜನೆಯನ್ನು ಮಾಡಲಾಗಿದೆ. (Division of labour) ಮಹಿಳೆಯರ ದೈಹಿಕ ಸಾಮರ್ಥ್ಯಕ್ಕನುಗುಣ ವಾಗಿ, ಕಷ್ಟಕರವಲ್ಲದ ಕೆಲಸಗಳನ್ನು ನಿರ್ವಹಿಸಿಕೊಂಡು ಹೋಗಲು ಶ್ರಮದ ವಿಭಜನೆ ಮಾಡಲಾಗಿದೆ. ಕಠಿಣ ಕೆಲಸಗಳನ್ನು, ಯಂತ್ರೋಪಕರಣಗಳ ಕೆಲಸವನ್ನು ನಿರ್ವಹಿಸುವವರು ಪುರುಷರು. ಹೀಗೆ ಪುರುಷ ಮತ್ತು ಮಹಿಳೆಯ ದೈಹಿಕ ಸಾಮರ್ಥ್ಯಕ್ಕನುಗುಣವಾಗಿ ಶ್ರಮವಿಭಜನೆ ಮಾಡಲಾಗಿದೆ.

## ೪.೨ ಮಹಿಳಾ ದುಡಿಮೆಯ ನಿರ್ವಚನ

ಮಾನವ ಸಮಾಜ ಸ್ಥಾಪನೆಯಾದ ಮೊದಲ ದಿನಗಳಲ್ಲಿ ಸ್ತ್ರೀ-ಪುರುಷರಿಬ್ಬರೂ ದುಡಿಯುತ್ತಿದ್ದು, ಯಾವುದೇ ತಾರತಮ್ಯವಿರಲಿಲ್ಲ. ಮಾನವನ ಇತಿಹಾಸದ ಪುಟಗಳನ್ನು ತಿರುವಿ ನೋಡಿದಾಗ ಮೊದಲು ದುಡಿಮೆಗಾರರೆಂಬ ಹೆಗ್ಗಳಿಕೆ ಹೆಣ್ಣಿಗಿದೆ. ಅವಳು ಪುರುಷನಿಗಿಂತಲೂ ಮೊದಲೇ ದುಡಿಯುವವಳಾಗಿದ್ದಳು, ಮೊದಲು ಕೃಷಿಕಳು ಮಹಿಳೆಯೇ ಆಗಿದ್ದಳು. ಯಾವುದೋ ಒಂದು ಹಂತದಲ್ಲಿ ಪುರುಷರ ಕೆಲಸ 'ದುಡಿಮೆ' ಎನಿಸಿ ಕೊಳ್ಳಲಾರಂಭಿಸಿದರೆ, ಸ್ತ್ರೀಯರ ಕೆಲಸ ಕರ್ತವ್ಯವಾಗಿ, ಮುಂದುವರೆಯಿತು. ಯಾವಾಗ ಶ್ರಮವು ಮಾರುಕಟ್ಟೆಗೆ, ವಸ್ತುಗಳ ವಿನಿಮಯಕ್ಕೆ ವಿಸ್ತಾರಗೊಂಡಿತೋ ಹಾಗೂ ಕೆಲಸವು ಹಣದ ವಿನಿಯಮಕ್ಕೆ ಒಳಪಟ್ಟಿತೋ ಆವಾಗಿನಿಂದ ಕೆಲಸವು 'ದುಡಿಮೆ'ಯಾಗಿ ಪರಿವರ್ತನೆಗೊಂಡಿತು.

"ದುಡಿಮೆ ಎಂಬುದನ್ನೂ ಪುರುಷರಿಗೆ ನಿರ್ದಿಷ್ಟಪಡಿಸಲಾಗಿದೆ. 'ದುಡಿಮೆಗಾರ' ಎಂಬುದು ಪುರುಷಸೂಚಿ ನುಡಿಯಾಗಿದೆ. ಮಹಿಳೆಯರಿಗೆ ದುಡಿಮೆ ಸಾಧ್ಯವಿಲ್ಲ. ಅವರ ಕೆಲಸ ಕಾರ್ಯಗಳನ್ನು ದುಡಿಮೆಯೆಂದು ಸಮಾಜ ಪರಿಗಣಿಸುವುದಿಲ್ಲ. ಏಕೆಂದರೆ ಮಹಿಳೆಯರು ಮಾಡುವ ಅನೇಕ ಕೆಲಸಗಳು, ಮುಖ್ಯವಾಗಿ ಗೃಹವಾರ್ತೆ ಕೆಲಸಗಳು, ಮಕ್ಕಳ ಲಾಲನೆ-ಪಾಲನೆ ಮುಂತಾದವು ಸಂಪಾದನೆ ಒದಗಿಸುವುದಿಲ್ಲ. ಈ ಕೆಲಸಗಳಿಗೆ ವಿನಿಮಯ ಮಹತ್ವವಿಲ್ಲ. ಈ ಕೆಲಸಗಳು ಕೇವಲ ಉಪಯುಕ್ತ ಮಹತ್ವ ಪಡೆದಿವೆ. ಮಹಿಳೆಯರು ಆರ್ಥಿಕವಾಗಿ ಪುರುಷರನ್ನು ಅವಲಂಬಿಸಿಕೊಂಡಿರಬೇಕು ಎಂಬುದು ಅಲಿಖಿತ ನಿಯಮವಾಗಿದೆ. ಗಂಡು ನಿರುದ್ಯೋಗಿಯಾಗಿದ್ದು ಹೆಣ್ಣು ಉದ್ಯೋಗಸ್ಥೆಯಾಗಿದ್ದ ಸಂದರ್ಭದಲ್ಲಿಯೂ ಗೃಹವಾರ್ತೆ ಮತ್ತು ಮಕ್ಕಳ ಪಾಲನೆ ಕೆಲಸಗಳು ಮಾತ್ರ ಹೆಣ್ಣಿಗೆ ಮೀಸಲಾಗಿವೆ."[೧]

ಮಹಿಳೆಯ ದುಡಿಮೆಯನ್ನು ಮೌಲ್ಯವಾಗಿಸದೆ, ಉತ್ಪಾದಕವೆಂದು ಪರಿಗಣಿಸದೇ, ಇರುವುದರಿಂದಾಗಿ ಮಹಿಳೆಯ ದುಡಿಮೆಯು ಆರ್ಥಿಕವಲಯದಲ್ಲಿ ಹಿಂದೆ ಬೀಳುತ್ತಿದೆ. ಅವರ ಜೈವಿಕ ಕಾರಣಗಳನ್ನು ಮುಂದೆಮಾಡಿ ಮಹಿಳೆ ದುರ್ಬಲಳೆಂದು ಅವಳ ದುಡಿಮೆಯನ್ನು ಮಾನ್ಯ ಮಾಡದೇ ಇರುವುದು ಶೋಚನೀಯವಾಗಿದೆ. ಮಹಿಳೆಯರು ಮಾಡುವ ಗೃಹಕೃತ್ಯ, ಮಕ್ಕಳ ಪಾಲನೆ-ಪೋಷಣೆಯೂ, ಹಿರಿಯರ ಅವಶ್ಯಕತೆಗಳ ಪೂರೈಕೆ, ಅವರ ಆರೈಕೆ, ಸಂತಾನೋತ್ಪತ್ತಿ ಇವೆಲ್ಲವೂ ಹೆಣ್ಣಿನ ಕರ್ತವ್ಯವಾಗಿವೆ, ಈ ದುಡಿಮೆಗೆ ಯಾವುದೇ ಮೌಲ್ಯವಿಲ್ಲ. ಈ ಆರೈಕೆಯನ್ನು ಆಸ್ಪತ್ರೆಯಲ್ಲಿನ ನರ್ಸಗಳು ನಿರ್ವಹಿಸಿದರೆ ಅವರ

ಸೇವೆಗೆ ಸಂಬಳವನ್ನು ಕೊಡಲಾಗುತ್ತದೆ. ಅವರ ಸೇವೆ ದುಡಿಮೆ ಎನಿಸಿಕೊಳ್ಳುತ್ತದೆ. ಆದರೆ ಮನೆಯಲ್ಲಿ ಮಾಡುವ ಈ ದುಡಿಮೆಗೆ ಮೌಲ್ಯವಿಲ್ಲ ಅದು ಮೌಲ್ಯವಿಲ್ಲದ ದುಡಿಮೆಯಾಗಿದೆ.

## ೪.೩ ಮಹಿಳಾ ದುಡಿಮೆಯ ಕುರಿತು ಸ್ತ್ರೀವಾದಿ ನಿಲುವುಗಳು

ಸ್ತ್ರೀವಾದಿ ದೃಷ್ಟಿಕೋನವು ಹೆಣ್ಣಿನ ದುಡಿಮೆಗೆ, ಅವಳ ಅಸ್ತಿತ್ವಕ್ಕೆ ಬೆಲೆ ಕೊಡಬೇಕೆಂದು ಪ್ರತಿಪಾದಿಸುತ್ತದೆ. ಹೆಣ್ಣು ಗಂಡಿಗಿಂತಲೂ ಶ್ರೇಷ್ಠಳು ಮತ್ತು ಶಕ್ತಿವಂತಳು. ಹೆಣ್ಣಿನಲ್ಲಿರುವ ಮರುಉತ್ಪಾದನಾ ಸಾಮರ್ಥ್ಯ ಗಂಡಿನಲಿಲ್ಲ. ಈ ಮರುಉತ್ಪಾದನಾಶಕ್ತಿ, ಗರ್ಭಾಶಯವನ್ನು ಹೊಂದಿದ ಮಹಿಳೆಯು ಶ್ರೇಷ್ಠವೆಂದು ಪ್ರತಿಪಾದಿಸುತ್ತಾರೆ.

* ದುಡಿಮೆಯ ಪರಿಕಲ್ಪನೆಯು ಪುರುಷ ವಾಚಿಯಾಗಿದ್ದು ಸೀಮಿತ ಅರ್ಥವನ್ನು ಹೊಂದಿದೆ. ಮಹಿಳೆಯರ ಕೆಲಸಗಳನ್ನು ಅದರಿಂದ ಹೊರಗಿಟ್ಟು, ಅವುಗಳನ್ನು ಅಗೋಚರಗೊಳಿಸಿದೆ ಹಾಗೂ ಅಪಮೌಲ್ಯಗೊಳಿಸಿದೆ.
* ನಮ್ಮ ಸಾಂಪ್ರದಾಯಿಕ ಹಾಗೂ ಸಾಂಸ್ಕೃತಿಕ ಮೌಲ್ಯಗಳು ಮಹಿಳೆಯರ ದುಡಿಮೆಯನ್ನು ಅಗೋಚರಗೊಳಿಸುತ್ತಿವೆ.
* ದುಡಿಮೆಗೆ ಸಂಬಂಧಿಸಿದ 'ದುಡಿಮೆಗಾರ', 'ಬಂಡವಾಳಶಾಹಿ', 'ಯಜಮಾನ' ಪದಗಳು ಪುರುಷ ಸೂಚಿಯೇ ಆಗಿವೆ. ಮಹಿಳೆಯರ ಕುರಿತು ಪದಸೂಚಿಗಳಿರದೇ ಇರುವುದನ್ನು ಪ್ರಶ್ನಿಸುತ್ತಾರೆ.
* ಪುರುಷರಂತೆ ಮಹಿಳೆಯರು ಕೂಡ ಹೊರಗಿನ ದುಡಿಮೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದರಿಂದ ಪುರುಷರು ಮನೆಕೆಲಸದಲ್ಲಿ ಸಮಾನ ಜವಾಬ್ದಾರಿಯನ್ನು ತೆಗೆದುಕೊಳ್ಳಬೇಕು ಅಥವಾ ಕುಟುಂಬದ ಜವಾಬ್ದಾರಿಗಳು ವೇತನ ನೀಡುವ ವೃತ್ತಿಗಳಾಗಬೇಕೆಂದು ಉದಾರವಾದಿಗಳು ಹೇಳುತ್ತಾರೆ.
* ಲಿಂಗ ತಾರತಮ್ಯವನ್ನು ವಿವಾಹ, ಕುಟುಂಬ ವ್ಯವಸ್ಥೆ, ಲಿಂಗಾಧಾರಿತ ಶ್ರಮವಿಭಜನೆ ಮತ್ತು ಸಾಮಾಜಿಕ ಕಟ್ಟುಪಾಡುಗಳ ಮೂಲಕ ನಡೆಸಿಕೊಂಡು ಹೋಗಲಾಗುತ್ತಿದೆ. ಮತ್ತು
* "ತೀವ್ರಗಾಮಿ ಸ್ತ್ರೀವಾದಿಗಳು ವೇಶ್ಯಾವೃತ್ತಿಯನ್ನು ದುಡಿಮೆಯೆಂದು ಪರಿಗಣಿಸಬೇಕೆಂದು ಹೇಳುತ್ತಾರೆ. ಅವರು ವೇಶ್ಯಾವೃತ್ತಿಯಿಂದ ಆದಾಯಗಳಿಸಿ ತಮ್ಮ ಹಾಗೂ ಕುಟುಂಬಗಳ ನಿರ್ವಹಣೆ ಮಾಡುವುದರಿಂದ ಅವರು ದುಡಿಮೆಗಾರರಾಗುತ್ತಾರೆ ಎಂದು ಹೇಳಿ ಅವರನ್ನು 'ಲೈಂಗಿಕ ಕೆಲಸಗಾರರು' ಎಂದು ಕರೆಯಲಾಗುತ್ತದೆ."[೨]
* "ಮಾರ್ಕ್ಸ್‌ವಾದ ಹಾಗೂ ಸಮಾಜ ವಾದಗಳೆರಡೂ ಆರ್ಥಿಕ ಮೂಲವನ್ನೇ ಅಸಮಾನತೆಯ ಪ್ರಧಾನ ನೆಲೆಗಳೆಂದು ಗುರುತಿಸುತ್ತವೆ. ಮಾರ್ಕ್ಸ್‌ವಾದವು ಖಾಸಗಿ ಆಸ್ತಿ, ದುಡಿಮೆ ಹಾಗೂ ಗಳಿಕೆಗಳಿಗೆ ಸಾಮಾಜಿಕರಿಗೆ ಲಭ್ಯವಾಗುವ ಅವಕಾಶಗಳು ಮೂಲತಃ ಸಂಪನ್ಮೂಲ ವಿತರಣೆಯಲ್ಲಿ ಅಸಮಾನತೆಯನ್ನು ಜಾರಿಗೊಳಿಸುವ ತಂತ್ರಗಳೆಂದು ಗುರುತಿಸುತ್ತದಾದರೆ, ಸಾಮಾಜಿಕ ಶ್ರೇಣೀಕರಣದ

ತಂತ್ರವೇ ಈ ನೆಲೆಗಳನ್ನು ಜಾರಿಗೊಳಿಸುತ್ತದೆ ಎಂದು ಸಮಾಜವಾದವು ವ್ಯಾಖ್ಯಾನಿಸುತ್ತದೆ. ಸ್ತ್ರೀ-ಪುರುಷರ ಅಸಮಾನತೆಯಲ್ಲಿ ಈ ಎರಡು ಕಾರಣಗಳು ಕೆಲಸ ಮಾಡುತ್ತವೆ."[೩]

* "ಅಸಮಾನತೆಯ ನೆಲೆಗಳು ಪ್ರಧಾನವಾಗಿ ಆರ್ಥಿಕ ಮೂಲದವೇ ಆಗಿದ್ದು, ಸಾಮಾಜಿಕ ಶ್ರೇಣೀಕರಣವು ಅದನ್ನು ಜಾರಿಗೊಳಿಸುವ ಪ್ರಧಾನ ತಂತ್ರವಾಗಿದೆ ಎಂದು ಮಾರ್ಕ್ಸ್‌ವಾದ ಮತ್ತು ಸಮಾಜವಾದದ ಚಿಂತನೆಗಳಾಗಿವೆ."[೪]
* ಸಮಾನತೆಯೆಡೆಗೆ ವರದಿಯಲ್ಲಿ ಐದನೆಯ ಅಧ್ಯಾಯವು ಮಹಿಳೆಯರು ಆರ್ಥಿಕತೆಯಲ್ಲಿ ಭಾಗವಹಿಸುವಂತ ಅಂಶವನ್ನು ಹೇಳಲಾಗಿದೆ. "ಉದ್ಯೋಗಾವಕಾಶ ಮತ್ತು ಸಂಭಾವನೆಯಲ್ಲಿನ ತಾರತಮ್ಯವನ್ನು ಒಳಗೊಂಡಂತೆ ಉದ್ಯೋಗಸ್ಥ ಮಹಿಳೆಯ ಸಮಸ್ಯೆಗಳನ್ನು ಸಮೀಕ್ಷಿಸುವುದು ಮತ್ತು ದೇಶದ ಅಭಿವೃದ್ಧಿಯಲ್ಲಿ ಮಹಿಳೆಯರು ಸಂಪೂರ್ಣ ಹಾಗೂ ಸರಿಯಾದ ರೀತಿಯಲ್ಲಿ ಪಾಲ್ಗೊಳ್ಳುವುದಕ್ಕೆ ಬೇಕಾದ ಇತರ ಮಾದರಿಗಳನ್ನು ಕುರಿತು ಸಲಹೆ ನೀಡುವುದು."[೫]

## ೪.೪ ಮಹಿಳಾ ದುಡಿಮೆಯ ಸ್ವರೂಪ

ಶಿಕ್ಷಣ ಎನ್ನುವುದು ಎಂದಿನಂತೆ ಪುರುಷ ಪ್ರಧಾನವಾಗಿದೆ. ಅದು ಸ್ತ್ರೀಯರಿಗೆ ಆರ್ಥಿಕ ಸ್ವಾತಂತ್ರ್ಯವನ್ನು ತಂದುಕೊಡಬಹುದಾದಂತಹ ಉದ್ಯೋಗಾವಕಾಶಗಳನ್ನು ಒದಗಿಸಿಕೊಟ್ಟಿದೆ ಎನ್ನುವುದನ್ನು ಅಲ್ಲಗಳೆಯುವಂತಿಲ್ಲ. ಆದರೆ ನಿಜವಾದ ಅರ್ಥದಲ್ಲಿ ನೋಡಿದರೆ ಸನಾತನ ಕಾಲದಿಂದಲೂ ಬಂದಿರುವಂತಹ, ಸಂಪ್ರದಾಯಗಳು, ನಂಬಿಕೆಗಳು, ಹೆಣ್ಣಿನ ಅಲಂಕರಣವ್ಯಾಮೋಹ, ಅಂದಶ್ರದ್ಧೆ, ಧರ್ಮವನ್ನು ಕುರಿತು ಯೋಚಿಸುವ ವಸ್ತುನಿಷ್ಠವಾಗಿ ಆಲೋಚಿಸುವ ಶಕ್ತಿಯನ್ನು ಪ್ರಚೋದಿಸುತ್ತಿಲ್ಲ. ಬದಲಿಗೆ ಸ್ತ್ರೀಯರ ವೈಚಾರಿಕ ದಾರಿದ್ರ್ಯವನ್ನು ಹೋಗಲಾಡಿಸುವಂತಹ ಕಾರ್ಯದಲ್ಲಿ ವಿಫಲವಾಗುತ್ತ ಬಂದಿದೆ. ಶಿಕ್ಷಣ ಪುರುಷನಿಗೆ ವಿಜ್ಞಾನ-ತಂತ್ರಜ್ಞಾನವನ್ನು ಬೋಧಿಸುವುದರ ಜೊತೆ ಜೊತೆಗೆ ವೈಚಾರಿಕವಾಗಿ ಶ್ರೀಮಂತವಾಗುವಂತೆ ಪ್ರೇರೇಪಿಸುತ್ತದೆ. ಪುರುಷರು ಶಿಕ್ಷಣ ವಲಯದಲ್ಲಿ ಸಾಧಿಸಿದ ಯಶಸ್ಸನ್ನು ದುಡಿಮೆಯ ವಲಯದಲ್ಲಿಯೂ ಸಾಧಿಸಿದ್ದಾರೆ. ಇದಕ್ಕೆ ಪುರುಷರು ದೈಹಿಕವಾಗಿ ಪ್ರಬಲರಾಗಿರುವುದು ಒಂದು ಕಾರಣವಾದರೆ, ದುಡಿಯಲು ನೀಡುವ ತರಬೇತಿಯು ಇನ್ನೊಂದು ಕಾರಣವಾಗಿದೆ. ದುಡಿಯುವ ಪುರುಷನಿಗೆ ಹೆಚ್ಚಿನ ಕೂಲಿ ಲಭ್ಯವಾಗುತ್ತದೆ. ಜೈವಿಕವಾಗಿ ದುರ್ಬಲಳಾದ ಮಹಿಳೆ ದುಡಿಮೆಗೆ ಸಂಬಂಧಿಸಿದ ಯಾವುದೇ ತರಬೇತಿಯನ್ನು ಪಡೆಯದೆ ಇರುವುದರಿಂದ ಹೆಚ್ಚು ಶ್ರಮವಹಿಸಿ ದುಡಿದರು ಕಡಿಮೆ ಕೂಲಿ ಲಭ್ಯವಾಗುತ್ತದೆ. ಮನೆಯ ಒಳಗೂ ಮತ್ತು ಮನೆಯ ಹೊರಗೂ ಮಹಿಳೆಯರು ದುಡಿಯುತ್ತಾರೆ. ಮಹಿಳೆಯ ಈ ತೆರನಾದ ದುಡಿಮೆಯನ್ನು ಅಧ್ಯಯನಗಳು ಹೀಗೆ ನಿರ್ವಚಿಸಿವೆ.

"ಕಾಲಬಳಕೆಯ ಅಧ್ಯಯನಗಳು ಮಹಿಳೆಯರ ದುಡಿಮೆಯನ್ನು ಕುರಿತಂತೆ ಕಂಡುಹಿಡಿದ ಬಹುಮುಖ್ಯ ಸಂಗತಿಯೆಂದರೆ ಅವರ ಮೂರು ಬಗೆಯ ದುಡಿಮೆಗಳ ವರ್ಗೀಕರಣ.

೧. ಸಂತಾನೋತ್ಪತ್ತಿ

೨. ಮನೆವಾರ್ತೆ ದುಡಿಮೆ

೩. ಉತ್ಪಾದನಾ ದುಡಿಮೆ"[೬]

ಈ ವರ್ಗೀಕರಣವು ಮಹಿಳೆಯ ದುಡಿಮೆಯ ಸ್ವರೂಪವನ್ನು ವಿಶ್ಲೇಷಿಸುತ್ತದೆ. ಮಹಿಳೆಯರು ನಿರ್ವಹಿಸುವ ಗರ್ಭಧರಿಸುವಿಕೆ, ಹೆರಿಗೆ, ಸಂತಾನೋತ್ಪತ್ತಿ, ಪಾಲನೆ-ಪೋಷಣೆ ಮಾಡುವ ಕ್ರಿಯೆಯು ಆರ್ಥಿಕತೆಗೆ ಒಳಪಡುವುದಿಲ್ಲ. ಈ ದುಡಿಮೆಯು ಅನುತ್ಪಾದಕ ದುಡಿಮೆಯೆನಿಸಿರುವುದರಿಂದ ಮಹಿಳೆಯ ಸಂತಾನೋತ್ಪತ್ತಿಯನ್ನು ಮೌಲ್ಯವಾಗಿಸಿಲ್ಲ. ಅದೇ ರೀತಿಯಾಗಿ ಮನೆವಾರ್ತೆಯು ಕೂಡ ಮಹಿಳೆಯನ್ನು ಉತ್ಪಾದಕತೆಯಿಂದ ದೂರವಿರಿಸಿದೆ. ಅವಳು ನಿರ್ವಹಿಸುವ ಮಕ್ಕಳ ಪಾಲನೆ-ಪೋಷಣೆ ಇತರ ಸದಸ್ಯರ ಬೇಕು-ಬೇಡಗಳಿಗೆ ಸ್ಪಂದಿಸುವುದು, ಹಬ್ಬ-ಹರಿದಿನಗಳೆಲ್ಲವೂ, ವ್ರತ ಆಚರಣೆಗಳೆಲ್ಲವೂ ಒಟ್ಟಾಗಿ ಮನೆವಾರ್ತೆ ಎನಿಸಿಕೊಳ್ಳುತ್ತವೆ. ಈ ದುಡಿಮೆ ಆರ್ಥಿಕತೆಯಲ್ಲಿ ಉತ್ಪಾದನೆ ಎನಿಸುವುದಿಲ್ಲ. ಅದೇ ರೀತಿಯಾಗಿ ಮೂರನೆಯ ವರ್ಗೀಕರಣವಾದ ಉತ್ಪಾದನಾ ದುಡಿಮೆ, ಮಹಿಳೆಯೂ ಶ್ರಮವಹಿಸಿ ದುಡಿಯುವ, ಅವಳ ಶ್ರಮಕ್ಕೆ ನೀಡುವ ಕೂಲಿಯು ಉತ್ಪಾದನಾ ದುಡಿಮೆ ಎನಿಸಿಕೊಳ್ಳುತ್ತದೆ ಮತ್ತು ಅದಕ್ಕೆ ಮೌಲ್ಯವನ್ನು ನೀಡಲಾಗಿದೆ.

ಉದಾ: ಕೃಷಿ ಕೆಲಸ, ಕಟ್ಟಡ ನಿರ್ಮಾಣ, ಗಾರೆ ಕೆಲಸ, ಗುಡಿಕೈಗಾರಿಕೆಗಳ ಕೆಲಸ ಇತ್ಯಾದಿ ಇವುಗಳು ಅಸಂಘಟಿತವಲಯದ ದುಡಿಮೆಗಳು ಎನಿಸಿವೆ. ಕೊಳಚೆ ಪ್ರದೇಶದಲ್ಲಿ ನೂರಕ್ಕೆ ತೊಂಬತ್ತರಷ್ಟು ಮಹಿಳೆಯರು ಅಸಂಘಟಿತ ವಲಯದಲ್ಲಿ ದುಡಿಮೆ ಮಾಡುತ್ತಾರೆ. ಹೆಚ್ಚು ಶ್ರಮವಹಿಸಿ ದುಡಿಯುವ ಮಹಿಳೆಯರು ಲಿಂಗಾಧಾರಿತ ಶ್ರಮವಿಭಜನೆ, ಲಿಂಗ ತಾರತಮ್ಯವನ್ನು ಎದುರಿಸುತ್ತಾ, ಅವರ ಶ್ರಮಕ್ಕೆ ತಕ್ಕಂತಹ ಕೂಲಿಯನ್ನು ಪಡೆಯದೇ ಪುರುಷ ಪ್ರಧಾನ ವ್ಯವಸ್ಥೆಯಿಂದಾಗಿ ಹೆಣ್ಣಿನ ದುಡಿಮೆಗೆ ಯಾವುದೇ ಮಹತ್ವ ನೀಡದಿರುವುದು ಇಲ್ಲಿ ಗೋಚರಿಸುವ ಮುಖ್ಯ ಅಂಶಗಳಲ್ಲಿ ಒಂದಾಗಿದೆ.

## ೪.೫ ಕೊಳಚೆ ಪ್ರದೇಶದಲ್ಲಿ ಲಿಂಗಾಧಾರಿತ ಶ್ರಮವಿಭಜನೆ

ಮಹಿಳೆಯರ ದೈಹಿಕ ರಚನೆಯು ತುಂಬಾ ಕೋಮಲವೂ, ಮೃದುವೂ ಆಗಿರುವುದರಿಂದ ಅವಳಿಗೆ ಭೌತಿಕವಾಗಿ ಕಷ್ಟದಾಯಕವಾದ ಕೆಲಸಗಳನ್ನು ಮಾಡಲು ಸಾಧ್ಯವಿಲ್ಲ ಎಂದು ಹೇಳಲಾಗುತ್ತಿದೆ. ಅವಳ ದೇಹವು ಜೈವಿಕವಾಗಿ ಅನೇಕ ಪರಿಮಿತಿಗಳಿಗೆ ಒಳಗಾಗಿದೆ. ಗರ್ಭ ಧರಿಸಿದ ಸಂದರ್ಭದಲ್ಲಿ, ಬಾಣಂತಿತನದ ಸಂದರ್ಭದಲ್ಲಿ, ಮಾಸಿಕ ಋತುಸ್ರಾವದ ಸಂದರ್ಭದಲ್ಲಿ ಆಕೆಯ ದೇಹ ಕೆಲಸ ಮಾಡುವ ಸ್ಥಿತಿಯಲ್ಲಿರುವುದಿಲ್ಲ."[೯] ಈ ರೀತಿಯಾದ ಕಾರಣಗಳನ್ನು ಮುಂದೆ ಇಡುತ್ತಾ, ಮಹಿಳೆಯ ಜೈವಿಕತೆಯಿಂದಾಗಿ ಆಕೆ ಶ್ರಮದಾಯಕವಾದ ಕೆಲಸಗಳನ್ನು ಮಾಡಲು ಅಸಮರ್ಥಳು ಎಂದು ಹೇಳಲಾಗುತ್ತಿದೆ. ಪುರುಷರೊಂದಿಗೆ ದುಡಿಯುವ ಮಹಿಳೆಯರ ಶ್ರಮವನ್ನು ಅವಹೇಳನ ಮಾಡಿ, ಆಕೆಯ ದುಡಿಮೆಯನ್ನು ಮೌಲ್ಯವಾಗಿಸುತ್ತಿಲ್ಲ. ಸನಾತನ ಕಾಲದಿಂದಲೂ ಬೆಳೆದು ಬಂದಿರುವಂತಹ ಗೃಹವಾರ್ತೆ, ಮಕ್ಕಳ ಪಾಲನೆ-ಪೋಷಣೆಯನ್ನು ಮಾಡಿಕೊಂಡು ಹೋಗಬೇಕೆಂದು ಹೇಳಲಾಗುತ್ತಿದೆ ಹೊರತು ಅವಳ ಶ್ರಮಕ್ಕೆ ಮೌಲ್ಯ ಮಾಡುತ್ತಿಲ್ಲ.

ಅಧ್ಯಯನಕ್ಕಾಗಿ ಆಯ್ದುಕೊಳ್ಳಲಾಗಿರುವ ಕೊಳಚೆ ಪ್ರದೇಶಗಳ ದುಡಿಮೆಗಾರರಲ್ಲಿ ಮಹಿಳೆಯರ ದುಡಿಮೆಗೂ ಮತ್ತು ಪುರುಷರ ದುಡಿಮೆಗೂ ಹೋಲಿಕೆ ಮಾಡಿದರೆ ಲಿಂಗಾಧಾರಿತ ಶ್ರಮವಿಭಜನೆ ಮತ್ತು ಅಲ್ಲಿರುವಂತಹ ತಾರತಮ್ಯ ಗೋಚರಿಸುತ್ತದೆ.

ಉದಾ : ಹೀರಾಪೂರನ ಗೋದಾಮೊಂದರಲ್ಲಿ ಕೆಲಸ ಮಾಡುವ ಮಹಿಳೆ ಮತ್ತು ಪುರುಷರ ದುಡಿಮೆಯನ್ನು ಹೋಲಿಕೆ ಮಾಡಿದಾಗ, ಅಲ್ಲಿ ಒಟ್ಟು ಮಹಿಳಾ ದುಡಿಮೆಗಾರರಿಗೆ ಒಂದು ದಿನಕ್ಕೆ ೩೦ರಿಂದ ೫೦ರೂ.ವರೆಗೆ ಕೂಲಿಯನ್ನು ನಿಗದಿಪಡಿಸಲಾಗಿದೆ. ನಿಮಗೆ ನೀಡುವ ಕಡಿಮೆ ಕೂಲಿಯ ಬಗ್ಗೆ ನೀವು ಪ್ರಶ್ನೆ ಮಾಡಬೇಕು ಎಂದು ಪ್ರಶ್ನಿಸಿದಾಗ, ಅವರು ಕೊಡುವ ಉತ್ತರ ಹೀಗಿದೆ. "ಅವರು ಗಂಡಾಳುಗಳು ನಮಗಿಂತಲೂ ಹೆಚ್ಚಿನ ಕೆಲಸವನ್ನು ಅವರು ಮಾಡುತ್ತಾರೆ. ಅವರು ಮಾಡುವಂತಹ ಕೆಲಸಗಳು ನಮ್ಮಿಂದ ಮಾಡಲಾಗುವುದಿಲ್ಲ, ಅದಕ್ಕಾಗಿ ಅವರು ಹೆಚ್ಚಿನ ಕೂಲಿಯನ್ನು ಪಡೆಯುತ್ತಾರೆ. ನಾವು ಬಂದಂತಹ ಅಕ್ಕಿ, ಗೋಧಿಯನ್ನು ಒಂದು ಚೀಲದಲ್ಲಿ ತುಂಬಿಸಿಡುವ ಕೆಲಸ ಮಾಡುತ್ತೇವೆ. ಉಳಿದಂತ ಕೆಲಸಗಳು ಅಂದರೆ ಆ ಅಕ್ಕಿ ಮೂಟೆಗಳನ್ನು ಎತ್ತಿ ಪ್ಯಾಕ್ ಮಾಡುವ ಕೆಲಸ, ಮೂಟೆಗಳನ್ನು ಲಾರಿಗೆ ತುಂಬಿಸುವ, ಬಂದಂತಹ ಅಕ್ಕಿ, ಗೋಧಿ ಮೂಟೆಗಳನ್ನು ಕೆಳಗೆ ಇಳಿಸಿಕೊಳ್ಳುವ ಕೆಲಸ ಗಂಡಾಳುಗಳದಾಗಿರುವುದರಿಂದ ಅವರ ಹೆಚ್ಚಿನ ಶ್ರಮಕ್ಕೆ ಹೆಚ್ಚಿನ ಕೂಲಿಯನ್ನು ಪಡೆಯುತ್ತಾರೆ" ಎಂದು ಹೇಳುತ್ತಾರೆ.

ಇನ್ನೊಂದು ಉದಾಹರಣೆ ಮಾಕಾ ಲೇಔಟ್(ಕಾಂತಾ ಕಾಲೋನಿ)ನಲ್ಲಿ ಬರುವ ಇಟ್ಟಂಗಿ ಭಟ್ಟಿಯಲ್ಲಿ ಸುಮಾರು ೩೦ರಿಂದ ೫೦ ಜನ ಮಹಿಳೆಯರು, ಪುರುಷರು ದುಡಿಮೆ ಮಾಡುತ್ತಾರೆ. ಈ ಭಟ್ಟಿಯಲ್ಲಿ ಪುರುಷರು ೩೦೦ರಿಂದ ೫೦೦ರವರೆಗೆ ಕೂಲಿಯನ್ನು ಪಡೆಯುತ್ತಾರೆ. ಮಹಿಳೆಯರು ೩೦ರಿಂದ ೧೨೦ರವರೆಗೆ ಕೂಲಿಯನ್ನು ಪಡೆಯುತ್ತಾರೆ. ಅವರು ಮಾಡುವ ಕೆಲಸದಂತೆ ಕೂಲಿಯನ್ನು ನೀಡುತ್ತಾರೆ. ಪುರುಷ ಕಾರ್ಮಿಕರಿಗೂ, ಮಹಿಳಾ ಕಾರ್ಮಿಕರಿಗೂ ಕೊಡುವ ಕೂಲಿಯಲ್ಲಿ ವ್ಯತ್ಯಾಸವಿದೆ. ಇದು ಲಿಂಗಾಧಾರಿತ ಶ್ರಮವಿಭಜನೆಯನ್ನು ಎತ್ತಿ ತೋರಿಸುತ್ತದೆ. ಮಹಿಳೆಯರ ದುಡಿಮೆ ಹೆಚ್ಚು ಶ್ರಮದಾಯಕವಾಗಿದ್ದರೂ ಕಡಿಮೆ ಕೂಲಿಯನ್ನು ಕೊಡಲಾಗುತ್ತದೆ. ಓದು ಬರಹ ತಿಳಿಯದ, ವ್ಯವಹಾರ ಜ್ಞಾನವಿಲ್ಲದ ಮಹಿಳೆಯರು ಅವರು ನಿಗದಿಪಡಿಸಿದ ಕೆಲಸಕ್ಕೆ ಅನುಗುಣವಾಗಿ ನೀಡುವ ಕೂಲಿಯನ್ನು ತೆಗೆದುಕೊಳ್ಳುತ್ತಾರೆ. ಇವರು ಕಾಯಿಲೆ ಇದ್ದರೆ, ಭಟ್ಟಿಯ ಯಜಮಾನನಿಂದ ಕೊಂಚ ಕನಿಕರವನ್ನು ನಿರೀಕ್ಷಿಸುವಂತಿಲ್ಲ. ಅವನು ಅವರ ಚಿಕಿತ್ಸೆಗಾಗಿ ದುಡ್ಡು ಕೊಡುವುದಿಲ್ಲ. ದುಡ್ಡು ಕೇಳಿದರೆ ಅವರು ದುಡಿದ ಸಂಬಳದಲ್ಲಿಯೇ ಆಗಿದ್ದ ಖರ್ಚನ್ನು ತೋರಿಸಿ, ಕೂಲಿಯನ್ನು ಕೊಡುತ್ತಾರೆ. ಉಳಿದಂತೆ ಯಜಮಾನನಿಂದ ಯಾವ ರೀತಿಯಾದ ನಿರೀಕ್ಷೆಯಾಗಲಿ, ಸಹಾಯವಾಗಲಿ ಈ ದುಡಿಮೆಗಾರರು ಅದರಲ್ಲಿಯೂ ಮಹಿಳಾ ದುಡಿಮೆಗಾರರು ನಿರೀಕ್ಷಿಸುವಂತಿಲ್ಲ.

ಮಹಿಳಾ ದುಡಿಮೆಗಾರರಿಗೆ, ಗೋದಾಮಿನಿಂದ ಯಾವುದೇ ರೀತಿಯ ಸೌಲಭ್ಯಗಳು ಸಿಗುವುದಿಲ್ಲ. ಒಂದು ತಿಂಗಳಿನಲ್ಲಿ ಕನಿಷ್ಠ ಅವರು ಹತ್ತು ದಿನಗಳಿಂದ ಹದಿನೆಂಟು ದಿನಗಳವರೆಗೂ ದುಡಿಯುತ್ತಾರೆ. ಉಳಿದ ದಿನಗಳಲ್ಲಿ ಯಾವುದೇ ದುಡಿಮೆಯಿಲ್ಲದೆ ಇರುತ್ತಾರೆ. ಅವರು ಕೆಲಸದಲ್ಲಿರದ ಸಮಯದಲ್ಲಿ

ಅವರ ಬದಲು ಮತ್ತೊಬ್ಬರು ದುಡಿಮೆಗೆ ಬಂದಿರುತ್ತಾರೆ. ಅಂದರೆ ಒಂದು ತಿಂಗಳಿನಲ್ಲಿ ಹದಿನೈದು ದಿನ ಕೆಲಸ ಮಾಡಿದರೆ ಇನ್ನೂ ಹದಿನೈದು ದಿನಗಳಲ್ಲಿ ಮತ್ತೊಬ್ಬ ಮಹಿಳಾ ದುಡಿಮೆಗಾರರು ಕೆಲಸ ಮಾಡುತ್ತಾರೆ. ಅವರು ದುಡಿದಂತಹ ಹದಿನೈದು ದಿನಗಳ ಕೂಲಿ ಅಷ್ಟೆ ಅವರ ಕೈ ಸೇರುತ್ತದೆ. ಉಳಿದ ಹದಿನೈದು ದಿನಗಳ ಕೂಲಿ ಪಡೆಯದೆ ದುಡಿಮೆಯು ಇಲ್ಲದೆ ಇರುವುದು ಕಂಡುಬರುತ್ತದೆ. ಇಲ್ಲಿ ದುಡಿಯುವ ಮಹಿಳೆಯರು ಗರ್ಭಧರಿಸಿದಾಗ ಅಥವಾ ಹೆರಿಗೆಯಾದಾಗ ಅವರಿಗೆ ಯಾವುದೇ ರೀತಿಯ ಭತ್ಯೆ ದೊರೆಯುವುದಿಲ್ಲ. ಅವರು ಹೆರಿಗೆಗೆಂದು ಹೋದರೆ ಅವರ ಬದಲು ಬೇರೊಬ್ಬರನ್ನು ಕೆಲಸಕ್ಕೆ ಸೇರಿಸಿಕೊಳ್ಳುತ್ತಾರೆ. ಪುನಃ ಬಂದು ಕೆಲಸಕ್ಕೆ ಹಾಜರಾಗಬೇಕೆಂದರೆ ಕೆಲಸದ ಅಭದ್ರತೆಯಿರುತ್ತದೆ ಅವರನ್ನು ಕೆಲಸದಿಂದ ತೆಗೆದು ಹಾಕಲೂಬಹುದು. ಉದ್ಯೋಗದಲ್ಲಿ ಲಿಂಗಾಧಾರಿತ ಶ್ರಮ ವಿಭಜನೆಯೊಂದಿಗೆ, ಉದ್ಯೋಗದ ಅಭದ್ರತೆಯೂ ಮಹಿಳಾ ದುಡಿಮೆಗಾರರಿಗೆ ಕಾಡುತ್ತಿರುತ್ತದೆ.

## ೪.೬ ಅಸಂಘಟಿತ ವಲಯ ಮತ್ತು ಕೊಳಚೆ ಪ್ರದೇಶದ ಮಹಿಳಾ ದುಡಿಮೆ

ಕೊಳಚೆ ಪ್ರದೇಶದಲ್ಲಿ ವಾಸಿಸುವ ಮಹಿಳೆಯರೆಲ್ಲರೂ ಅಸಂಘಟಿತ ವಲಯದಲ್ಲಿ ದುಡಿಯುವವ ರಾಗಿದ್ದಾರೆ. ಅವರಲ್ಲಿ ಸಂಘಟಿತವಲಯಗಳಲ್ಲಿ ದುಡಿಯುವ ಮಹಿಳೆಯರು ಕಡಿಮೆ ಪ್ರಮಾಣದಲ್ಲಿದ್ದಾರೆ. ಅವರವರ ಸಾಮಾಜಿಕ ಹಾಗೂ ಆರ್ಥಿಕ ಅಂತಸ್ತಿಗನುಗುಣವಾಗಿ ಮಹಿಳಾ ದುಡಿಮೆಗಾರರನ್ನು ಅಥವಾ ಕಾರ್ಮಿಕರನ್ನು ಪ್ರಮುಖವಾಗಿ ಮೂರು ಭಾಗಗಳಲ್ಲಿ ವಿಂಗಡಿಸಬಹುದಾಗಿದೆ.

೧. ತುತ್ತು ಕೂಳಿಗೂ ಪರದಾಡಬೇಕಾದ, ಮಹಿಳಾ ಕಾರ್ಮಿಕರು, ಇಂಥಲ್ಲಿ ಕೃಷಿಕಾರ್ಮಿಕರು ಇದೊಂದು ದೊಡ್ಡ ವಿಭಾಗವೇ. ಹಳ್ಳಿಗಾಡಿನಲ್ಲಿ ಯಾವೊಂದು ಸುಸಂಬದ್ಧ ಸಂಘಟನೆಗಳ ವಲಯಗಳಲ್ಲಿ ಇವರನ್ನು ಹೆಚ್ಚು ಹೆಚ್ಚಾಗಿ ಕಾಣಬಹುದು. ಇಂಥಲ್ಲಿ ಕೃಷಿ ಕಾರ್ಮಿಕರೆಲ್ಲರೂ, ಅತಿಸಣ್ಣ ರೈತರ ಹೆಂಡಿರು, ಮಕ್ಕಳು, ಆಳು-ಕಾಳುಗಳಾಗಿಯೇ ಜೀವನ ಸವೆಸುವ ಮಂದಿಯೇ ಅಧಿಕ. ಇನ್ನೂ ಪಟ್ಟಣಗಳಲ್ಲಿ ಮನೆಕೆಲಸದವರು, ಅಲೆಮಾರಿ ಕಾರ್ಮಿಕರು, ಕಟ್ಟಡ ಕೂಲಿಯಾಳುಗಳು ಹಾಗೂ ಅಸಂಘಟಿತ ಕೈಗಾರಿಕೆಗಳಲ್ಲಿ ಕೆಲಸ ಮಾಡುವವರು.

೨. ಯಾವುದಾದರೂ ಸೇವಾ ಚಾಕರಿ, ವೃತ್ತಿ ಇತ್ಯಾದಿಗಳಲ್ಲಿ ತೊಡಗಿರುವವರು, ಇಂತವರಿಗೆ ಸ್ವಂತ ಜಮೀನಿದೆ. ಬೇಸಾಯವಿದೆ, ಭದ್ರತೆ ಜೀವಿತಗಳ ನಡುವೆ ಇವರ ಬದುಕು ಉಯ್ಯಾಲೆಯಾಡುತ್ತಿರುತ್ತದೆ.

೩. ಮೂರನೆಯದಾಗಿ ಸಮಾಜದ ಮೇಲ್‌ಸ್ತರದ ಮಹಿಳೆಯರು, ಇವರಿಗೆ ಉದ್ಯೋಗವೆಂಬುದು ತಮ್ಮ ಅಂತಸ್ತು ಆರಿಸಿಕೊಳ್ಳಲು ಮಾತ್ರವಲ್ಲ ಸ್ವಂತ ತಿಳುವಳಿಕೆಗೂ ಅವಶ್ಯಕ. ಇವರಿಗೆ ಆರ್ಥಿಕ ಬಲ, ವಿದ್ಯಾಬಲ ಎರಡೂ ಇದ್ದು ಮನೆಯಲ್ಲಿಯೂ ಉದ್ಯೋಗದಲ್ಲಿಯೂ ಗೌರವ ಭಾಗಿಗಳು."[೬]

ಈ ವರ್ಗೀಕರಣದಲ್ಲಿ ಗಮನಿಸಬೇಕಾದ ಪ್ರಮುಖ ಅಂಶ, ಬಡತನ, ಆರ್ಥಿಕ ಮುಗ್ಗಟ್ಟು, ಆರೋಗ್ಯದ ಸಮಸ್ಯೆ, ಉದ್ಯೋಗ, ಉದ್ಯೋಗದಲ್ಲಿಯ ಅಭದ್ರತೆ ಇವೆಲ್ಲವನ್ನು ಅನುಭವಿಸುವವರೂ ಕೆಳಜಾತಿಯ, ಕೆಳವರ್ಗದ ಜನರು. ತಮ್ಮ ಹೊಟ್ಟೆಯನ್ನು ತುಂಬಿಸಿಕೊಳ್ಳುವುದಕ್ಕಾಗಿ ಊರಿಂದ ಊರಿಗೆ

ಮತ್ತು ಪಟ್ಟಣಗಳಿಗೆ ವಲಸೆ ಹೋಗುವ ತಾಪತ್ರಯ, ಭವಿಷ್ಯಕ್ಕೆ ಸ್ವಲ್ಪ ಹಣವನ್ನು ಕೂಡಿಡಬೇಕೆಂದು, ಹೆಚ್ಚಿನ ಶ್ರಮವಹಿಸಿ ದುಡಿಯುವವರು, ಕಷ್ಟದ ಬದುಕು ಎದುರಿಸುವವರು ಕೊಳಚೆ ಪ್ರದೇಶದ ಜನರೇ ಆಗಿರುತ್ತಾರೆ.

ಅಧ್ಯಯನಕ್ಕಾಗಿ ಆಯ್ದುಕೊಂಡ ಕೊಳಚೆ ಪ್ರದೇಶಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರ ಕೆಲಸವನ್ನು ಹೀಗೆ ಗುರುತಿಸಲಾಗಿದೆ.

೧. ಗಾರೆ ಕೆಲಸ ಮಾಡುವವರು

೨. ಇಟ್ಟಂಗಿ ಭಟ್ಟಿಯಲ್ಲಿ ದುಡಿಯುವವರು

೩. ಚಾಪೆ ಮಾರುವ ಮಹಿಳಾ ಕಾರ್ಮಿಕರು

೪. ಗೋದಾಮುಗಳಲ್ಲಿ ದುಡಿಯುವವರು

೫. ಇನ್ನಿತರ ಕೆಲಸ ಮಾಡುವವರು (ಟೈಲರಿಂಗ್, ವ್ಯಾಪಾರ, ಕಟ್ಟಿಗೆ ಮಾರುವುದು, ಪಾತ್ರೆ ಮಾರುವುದು, ಮನೆಗೆಲಸ, ಕೂಲಿಮಾಡುವವರು)

ಮೇಲೆ ಗುರುತಿಸಿದ ದುಡಿಮೆಗಳಲ್ಲಿ ಕೊಳಚೆ ಪ್ರದೇಶದ ಮಹಿಳೆಯರು ಶ್ರಮವಹಿಸಿ ದುಡಿಯುತ್ತಾರೆ. ಈ ಮಹಿಳೆಯರು ಹೆಚ್ಚಾಗಿ ಭಾರಿ ಅಸ್ವಸ್ಥರಾದರೆ ಮಾತ್ರ ಕೆಲಸ ನಿಲ್ಲಿಸುವವರು. ವೃದ್ಧಾಪ್ಯ, ಬಸಿರು, ಬಾಣಂತನ ಇತ್ಯಾದಿಗಳನ್ನು ಲಕ್ಷಿಸದೆ ಕೆಲಸ ಮಾಡುತ್ತಾರೆ. ಹೆರಿಗೆಯಾದ ಕೆಲವೇ ಕೆಲವು ದಿನಗಳಲ್ಲಿ ಮಗುವನ್ನು ಟೊಂಕಕ್ಕೆ ಕಟ್ಟಿ ದುಡಿಮೆಗೆ ಹೊರಡುವ ಮಹಿಳೆಯರು ಕಾಣಸಿಗುತ್ತಾರೆ. ಮನೆಯಲ್ಲಿರುವ ಕಿತ್ತು ತಿನ್ನುವ ಬಡತನ, ದುಶ್ಚಟಗಳಿಗೆ ದಾಸನಾಗಿರುವ, ಬೇಜವಾಬ್ದಾರಿ ಗಂಡ, ಮಕ್ಕಳನ್ನು ಪಾಲನೆ ಮಾಡುವ, ಅವರ ಭವಿಷ್ಯದ ಬಗೆಗೆ ಚಿಂತನೆ ಮಾಡುವ, ಎಲ್ಲ ಜವಾಬ್ದಾರಿಗಳು ಹೆಣ್ಣಿನ ಮೇಲೆಯೇ. ಹೀಗಿದ್ದಾಗ ಆಕೆಗೆ ಬಿಡುವಾಗಲಿ, ವಿಶ್ರಾಂತಿಯಾಗಲಿ ದೂರದ ಮಾತೆ ಆಗಿದೆ. ಇದರಿಂದಾಗಿ ಉದ್ಯೋಗದ ಅಭದ್ರತೆಯು ಕೂಡ ಅವಳ ಬದುಕನ್ನು ಅಲುಗಾಡಿಸಿ ಬಿಡುತ್ತದೆ. ಒಂದು ಉದ್ಯೋಗ ಕಳೆದುಕೊಂಡರೆ ಮತ್ತೊಂದು ಉದ್ಯೋಗವನ್ನರಸಿ ಹೊರಡುವುದು, ಮತ್ತೆ ಆ ಕೆಲಸಕ್ಕೆ ಹೊಂದಾಣಿಕೆಯಾಗುವುದು ಕಷ್ಟದ ಮಾತಾಗಿದೆ. ಇದರಿಂದಾಗಿ ಮಹಿಳೆಯರು ತಮ್ಮ ಉದ್ಯೋಗದ ಉಳಿವಿಗಾಗಿ ದುಡಿಮೆಯನ್ನು ಮಾಡಲು ಹೊರಡಲೇಬೇಕಾದ ಅನಿವಾರ್ಯತೆ ಈ ಪ್ರದೇಶದ ಮಹಿಳೆಯರಿಗಿದೆ.

## ೪.೭ ಕೊಳಚೆ ಪ್ರದೇಶದಲ್ಲಿನ ಮಹಿಳಾ ಬದುಕಿನ ಶೈಕ್ಷಣಿಕ ಪರಿಣಾಮಗಳು

ಅಧ್ಯಯನಕ್ಕೊಳಪಟ್ಟ ಐದು ಕೊಳಚೆ ಪ್ರದೇಶಗಳ ಒಟ್ಟು ಶೈಕ್ಷಣಿಕ ಪ್ರಮಾಣ ೧೦೦ಕ್ಕೆ ಶೇ. ೩೧.೨೫ರಷ್ಟು ಮಾತ್ರ ಕಂಡುಬರುತ್ತದೆ. ಶಿಕ್ಷಣದಿಂದ ವಂಚಿತರಾಗಿರುವ ಅನಕ್ಷರಸ್ಥ ಮಹಿಳೆಯರು ಹೆಚ್ಚಿನ ಪ್ರಮಾಣದಲ್ಲಿ ಇದ್ದಾರೆ, ಶಿಕ್ಷಣದಿಂದ ವಂಚಿತರಾಗಿರಲು ಕಾರಣವಾಗಿರುವ ಅಂಶಗಳನ್ನು ಕೆದಕುತ್ತಾ ಹೋದಾಗ ದೊರೆಯುವ ಉತ್ತರ, ನಮ್ಮ ಸಮಾಜದಲ್ಲಿರುವ ಪುರುಷ ಪ್ರಧಾನ ವ್ಯವಸ್ಥೆ ಮತ್ತು ಸಂಪ್ರದಾಯಗಳು, ಹೀರಾಪೂರ ಕೊಳಚೆ ಪ್ರದೇಶದಲ್ಲಿ ಸಂದರ್ಶಿಸಿದ ಮಹಿಳೆಯರಿಗೆ ಶಿಕ್ಷಣದಿಂದ ಯಾಕೆ ದೂರ ಉಳಿದಿರುವಿರಿ ಎಂದು

ಪ್ರಶ್ನಿಸಿದಾಗ ಅವರ ಉತ್ತರ ಹೀಗೆ ಇದೆ. "ನಾವು ಬಡವರು, ತಿನ್ನಲು, ಉಡಲು ಬಟ್ಟೆ ಇಲ್ಲ, ಅಂತದರಲ್ಲಿ ಶಾಲೆ ಕಲಿತು ನಾವು, ಯಾವ ರಾಜ್ಯವನ್ನಾಳಬೇಕಿದೆ, ನಮಗಿಷ್ಟು ಹೊಟ್ಟೆ ಬಟ್ಟೆಗಾದರೇ ಸಾಕು, ಒಳ್ಳೆಯ ಕೆಲಸವಿದ್ದರೆ ಕೊಡಿ, ಓದು ಬರಹ ನಮಗೆ ಬೇಡ, ನಾವು ಅಕ್ಷರ ಕಲಿತರೂ ಮತ್ತೆ ಗಂಡನ ಮನೆಯಲ್ಲಿ ಕೆಲಸ ಮಾಡುವುದು ತಪ್ಪುವುದಿಲ್ಲ. ಅಕ್ಷರ ಕಲಿತಿದ್ದಾಳೆ ಅಂತ ನಮಗೆ ಕೆಲಸದಿಂದ ಮುಕ್ತಿಯಿಲ್ಲ, ತವರು ಮನೆಯಲ್ಲೂ ಒಲೆ ಮುಂದೆ ಕೂಡಬೇಕು ಗಂಡನ ಮನೆಯಲ್ಲೂ ಹೋಗಿ ಒಲೆ ಮುಂದೆ ಕೂಡಬೇಕು. ಹೀಗಿರುವಾಗ ನಾವು ಅನಕ್ಷರಸ್ಥರಾಗಿ ಇರುವುದೇ ವಾಸಿ" ಎಂದು ಉತ್ತರಿಸಿದರು.

ಮಹಿಳೆಯರಿಂದ ಈ ರೀತಿಯಾಗಿ ಉತ್ತರ ಬರಲು ಹಿನ್ನೆಲೆ ಏನು ಎಂಬುದನ್ನು ಅವಲೋಕಿಸಿದಾಗ, ಸಿಗುವ ಉತ್ತರ ನಮ್ಮ ಸಮಾಜದಲ್ಲಿರುವ ಪುರುಷ ಪ್ರಧಾನ ವ್ಯವಸ್ಥೆ, ಸಂಪ್ರದಾಯಗಳು. ಈ ಮಾತುಗಳು ಮಹಿಳೆಯರ ಬಾಯಿಂದ ಬಂದವಾಗಿವೆ, ಆದರೆ ಅದರ ಹಿಂದೆ ಆಡಿಸುವ ಸೂತ್ರಧಾರ ಪುರುಷನಾಗಿದ್ದಾನೆ. ಹೆಣ್ಣುಮಕ್ಕಳ ಶಿಕ್ಷಣಕ್ಕೆ ಪ್ರೋತ್ಸಾಹ ಇರದೇ ಇಲ್ಲದಿರುವುರಿಂದ, ಮಹಿಳೆಯರು ಈ ರೀತಿಯಾಗಿ ಮಾತುಗಳನ್ನಾಡುವುದನ್ನು ಕಾಣುತ್ತೇವೆ.

ಸನಾತನ ಕಾಲದಿಂದಲೂ ಬೆಳೆದು ಬಂದಿರುವಂತಹ 'ಗೃಹಿಣಿತ್ವ'ವು ಹೆಣ್ಣಿಗಾಗಿ ರೂಪಿಸಲ್ಪಟ್ಟಿರುವ ಮೌಲ್ಯವಾಗಿದೆ. ಈ ಮೌಲ್ಯವನ್ನು ಹೆಣ್ಣು ತನ್ನ ಜೀವನದಲ್ಲಿ ಅಳವಡಿಸಿಕೊಳ್ಳಬೇಕು ಎನ್ನುವಂತಹ ಧೋರಣೆ ಪುರುಷ ಪ್ರಧಾನ ವ್ಯವಸ್ಥೆಯದು. ಈ ಸಾಂಪ್ರದಾಯಿಕ ಮೌಲ್ಯಗಳು ಹೆಣ್ಣಿನ ಸುತ್ತಮುತ್ತಲೂ ಆವರಿಸಿಕೊಂಡಿರುವುದರಿಂದ ಅವಳು ತನ್ನ ಸ್ವಂತಿಕೆಯನ್ನು ಕಳೆದುಕೊಂಡು ಸಂಪ್ರದಾಯಗಳಿಗೆ ಬದ್ಧಳಾಗಿ ನಡೆಯುವಂತಾಗುತ್ತದೆ. ಓರ್ವ ಮಹಿಳೆ ಶಿಕ್ಷಣವನ್ನು ಕಲಿಯಲು ಹೊರಟರೆ "ಶಾಲೆ ಕಲಿತು, ಯಾರಿಗೂ ಉದ್ಧಾರ ಮಾಡುವ ಅವಶ್ಯಕತೆ ಇಲ್ಲ" ಎನ್ನುವಂತಹ ಕಟು ಮಾತುಗಳು ಸುತ್ತಲಿನ ಜನರಿಂದ ಕೇಳಬೇಕಾಗುತ್ತದೆ. ಹೊಸ್ತಿಲು ದಾಟಿ ಹೊರಗೆ ಕಲಿಯಲು ಹೊರಟ ಮಹಿಳೆಯನ್ನು ಸಮಾಜ ಕಾಣುವ ದೃಷ್ಟಿಕೋನವೇ ಬೇರೆಯಾಗುತ್ತದೆ. ಹೆಣ್ಣನ್ನು ಸದಾ ಸಾಂಪ್ರದಾಯಿಕ ಚೌಕಟ್ಟಿನಲ್ಲಿಡುತ್ತಾ ಬಂದಿರುವ ಪುರುಷ ಪ್ರಧಾನ ವ್ಯವಸ್ಥೆಯು ಹುಟ್ಟುಹಾಕಿರುವ ಧರ್ಮವು ಕೂಡ ಮಹಿಳೆಯರು ಶಿಕ್ಷಣವನ್ನು ಪಡೆಯುವಂತೆ ಮಾಡುತ್ತದೆ ಮತ್ತು ಶಿಕ್ಷಣದಿಂದ ವಂಚಿತರನ್ನಾಗಿಯೂ ಮಾಡುತ್ತದೆ.

ಸುಧಾರಣಾವಾದಿ ಕಾಲಘಟ್ಟದಲ್ಲಿ ಶಿಕ್ಷಣವನ್ನು ಪಡೆಯಲು ಪ್ರೋತ್ಸಾಹಿಸಲಾಗುತ್ತಿತ್ತು. ಜಾರಿಗೆ ಬಂದಂತಹ ಶಿಕ್ಷಣವು ಹಿಂದೂಧರ್ಮದ ಮೇಲ್ವರ್ಗದ ಮಹಿಳೆಯರನ್ನು, ಮತ್ತೆ ಕ್ರಿಶ್ಚಿಯನ್ ಧರ್ಮದ ಮಹಿಳೆಯರಿಗೆ ನೀಡಲು ಮುಂದಾಯಿತು, ಉಳಿದಂತೆ ಮುಸ್ಲಿಂ ಮಹಿಳೆಯರು ಶಿಕ್ಷಣದಿಂದ ದೂರವೇ ಇರುವಂತಾಯಿತು, ಇಂದಿಗೂ ಕೂಡ ಈ ಧರ್ಮದವರಲ್ಲಿ ಕೆಲವರನ್ನು ಹೊರತುಪಡಿಸಿದರೆ ಉಳಿದಂತಹ ಮಹಿಳೆಯರು ಶಿಕ್ಷಣದಿಂದ ವಂಚಿತರಾಗಿಯೇ ಇದ್ದಾರೆ.

ಜಿಲಾನಾಬಾದ ಕೊಳಚೆ ಪ್ರದೇಶವು ಮುಸ್ಲಿಂ ಧರ್ಮದವರೇ ಹೆಚ್ಚಾಗಿ ವಾಸಿಸುವ ಪ್ರದೇಶವಾಗಿದೆ. ಈ ಪ್ರದೇಶದ ಶೈಕ್ಷಣಿಕ ಮಟ್ಟವು ಉಳಿದ ಪ್ರದೇಶಗಳಿಗಿಂತಲೂ ಕಡಿಮೆ ಪ್ರಮಾಣದಲ್ಲಿದೆ. ಶಿಕ್ಷಣದಿಂದ

ವಂಚಿತರಾಗಿರಲು ಪುರುಷ ಪ್ರಧಾನ ವ್ಯವಸ್ಥೆ ರೂಪಿಸಿರುವ ಮೌಲ್ಯಗಳಲ್ಲಿ ಒಂದಾದ 'ಮದುವೆ'ಯು, ಹೆಣ್ಣನ್ನು ಶಿಕ್ಷಣದಿಂದ ವಂಚಿತರಾಗುವಂತೆ ಮಾಡುತ್ತದೆ. ತಂದೆ ತಾಯಿಯರಿಗೆ ಇರುವ ಅರಿವಿನ ಕೊರತೆ, ಶಿಕ್ಷಣದ ಮಹತ್ವದ ಬಗ್ಗೆ ತಿಳುವಳಿಕೆಯಿರದೇ ಇರುವ, ಹೆಣ್ಣಿಗೆ ಏಕೆ ಶಿಕ್ಷಣ ಕೊಡಿಸಬೇಕೆಂಬ ಮನೋಭಾವ ಇವೆಲ್ಲದರ ಪರಿಣಾಮ ಹೆಣ್ಣಿನ ಶಿಕ್ಷಣದ ಮೇಲಾಗುತ್ತದೆ. ಜಿಲಾನಾಬಾದ ಪ್ರದೇಶದಲ್ಲಿ ಸಂದರ್ಶಿಸಿದ ಒಟ್ಟು ಮಹಿಳೆಯರಲ್ಲಿ ನಾಲ್ಕುಜನ ಮಹಿಳೆಯರು ಪ್ರೌಢಶಿಕ್ಷಣ ಮುಗಿಸಿದವರು ಇದ್ದಾರೆ, ಓದುಬರಹ ಕಲಿತ ನಿಮಗೆ ಹೇಗೆ ಅನಿಸುತ್ತದೆ, ಶಿಕ್ಷಣಬೇಕು ಅಂತಿರಾ ಅಥವಾ ಶಿಕ್ಷಣ ಬೇಡ ಅಂತಿರಾ ಎಂದು ಪ್ರಶ್ನಿಸಿದಾಗ, "ಶಿಕ್ಷಣದಿಂದ ಎಷ್ಟೊಂದು ಅನುಕೂಲಗಳಿವೆ, ನಮಗೆ ಓದಲು ಬರೆಯಲು ಬರುವುದರಿಂದ ವ್ಯಾಪಾರದಲ್ಲಿ ಮೋಸ ನಡೆದರೆ ಅದನ್ನು ಕಂಡು ಹಿಡಿಯಬಹುದು, ಮುಗ್ಧ, ಅನಕ್ಷರಸ್ಥ ಮಹಿಳೆಯರನ್ನು ಕಂಡರೆ ಮೋಸ ಮಾಡುವವರಿಗೆ ಮತ್ತಷ್ಟು ಅವಕಾಶವಿರುತ್ತದೆ. ಹೀಗಾಗಿ ನಾವು ಮೋಸ ಹೋಗುವುದರಿಂದ ತಪ್ಪಿಸಿಕೊಳ್ಳಲು ಶಿಕ್ಷಣ ಒಂದು ಅಸ್ತ್ರದಂತೆ, ನಿರ್ಣಾಯಕ ಪಾತ್ರ ವಹಿಸುತ್ತದೆ. ಆದ್ದರಿಂದ ನಮ್ಮ ಜನರು ಸೇರಿ, ಪ್ರತಿಯೊಬ್ಬ ಮಹಿಳೆಯು ಶಿಕ್ಷಣವನ್ನು ಪಡೆಯಬೇಕು, ಶಿಕ್ಷಣದಿಂದ ಲಾಭ ಇದೆ, ಅನುಕೂಲತೆಗಳಿವೆ ಹೊರತು ನಷ್ಟವೇನು ಇಲ್ಲ ಎಂಬುದು ಈ ಮಹಿಳೆಯರ ಉತ್ತರವಾಗಿದೆ." ಈ ನಾಲ್ಕು ಜನ ಮಹಿಳೆಯರಿಗೆ ಶಿಕ್ಷಣವನ್ನು ಪಡೆಯಬೇಕೆಂದಾಗ ಮನೆಯ ಸದಸ್ಯರಿಂದ ಒತ್ತಡಗಳು, ವಿರೋಧಗಳು ಎದುರಾದವು. ಎಲ್ಲರ ವಿರೋಧದ ಮಧ್ಯೆ, ಕಲಿಯಬೇಕೆಂಬ ಹಂಬಲದಿಂದಾಗಿ ಪ್ರೌಢ ಶಾಲೆಯವರೆಗೂ ಕಲಿತರು, ಮುಂದೆ ವಿವಾಹ ಮಾಡಿ ಕೊಡಲಾಯಿತು ಎಂದು ಉತ್ತರಿಸಿದರು.

ಬುದ್ಧನಗರದಲ್ಲಿ ಶಿಕ್ಷಣದ ಕಡೆಗೆ ಹೆಚ್ಚಿಗೆ ಒಲವು ಇದೆ. ಸಂದರ್ಶಿಸಿದ ಮಹಿಳೆಯರೆಲ್ಲರೂ ಅನಕ್ಷರಸ್ಥರಾಗಿದ್ದಾರೆ. ಆದರೆ ಈ ಪ್ರದೇಶದಲ್ಲಿ ಶಿಕ್ಷಣದ ಮಟ್ಟ ಹೆಚ್ಚಿಗೆ ಇದೆ, ಇಲ್ಲಿ ಪದವಿಯನ್ನು ಮುಗಿಸಿ, ಸ್ನಾತಕೋತ್ತರದ ಮೆಟ್ಟಿಲು ಹತ್ತಿದಂತಹ ಯುವಕ ಯುವತಿಯರಿದ್ದಾರೆ. ಶಿಕ್ಷಣವು ಇಲ್ಲದಿದ್ದಾಗ, ಸುಳ್ಳು, ಮೋಸ, ವಂಚನೆಗೆ ಒಳಗಾಗುವ ಸಾಧ್ಯತೆಗಳಿರುವುದನ್ನು ಮನಗಂಡು ಇಲ್ಲಿಯ ಮಹಿಳೆಯರು ತಮ್ಮ ಮಕ್ಕಳಿಗೆ ಒಳ್ಳೆಯ ಶಿಕ್ಷಣವನ್ನು ಕೊಡಿಸಲು ಮುಂದಾಗಿದ್ದಾರೆ. ಈ ನಗರದಲ್ಲಿ ಒಂದು ಅಂಗನವಾಡಿ ಕೇಂದ್ರವಿದೆ, ಒಂದು ಪ್ರಾಥಮಿಕ ಶಾಲೆ ಇದೆ. ಪ್ರೌಢ ಶಾಲೆಗೆ ನಗರಕ್ಕೆ ಹೋಗಬೇಕಾಗುತ್ತದೆ.

ನಗರವು ತುಂಬಾ ಸಮೀಪದಲ್ಲಿರುವುದರಿಂದ ಇವರು ಪ್ರೌಢಶಾಲೆಗೆ ಹೋಗಲು, ಕೊರತೆಯಿಲ್ಲ, ಪದವಿಪೂರ್ವ ಕಾಲೇಜುಗಳು ಇದ್ದು, ಶಿಕ್ಷಣವನ್ನು ಪಡೆಯಲು ಯಾವುದೇ ಕೊರತೆಯು ಕಂಡು ಬರುವುದಿಲ್ಲ. ಆದರೆ ಸಂದರ್ಶಿಸಿದ ಮಹಿಳೆಯರೆಲ್ಲರೂ ಅನಕ್ಷರಸ್ಥರಾಗಿದ್ದಾರೆ. ಅವರ ಅನಕ್ಷರತೆಗೆ, ತಂದೆ ತಾಯಿಯರ ಅರಿವಿನ ಕೊರತೆ, ಕಿತ್ತು ತಿನ್ನುವ ಬಡತನ, ಶಾಲೆಗೆ ಹೋದರೆ, ಮನೆಯಲ್ಲಿರುವ ಕೆಲಸ, ಚಿಕ್ಕಮಕ್ಕಳಿದ್ದರೆ ಅವುಗಳನ್ನು ನೋಡಿಕೊಂಡು ಹೋಗುವುದು ಇವೆಲ್ಲ ಕೆಲಸಗಳನ್ನು ಮಾಡುವುದು ಆಗುವುದಿಲ್ಲವೆಂದು ತಂದೆ ತಾಯಿಯರು ಶಿಕ್ಷಣದಿಂದ ವಂಚಿತರನ್ನಾಗಿ ಮಾಡಿದರು, ಮತ್ತು ಹೆಣ್ಣು ಶಿಕ್ಷಣ ಕಲಿತರೆ, ಒಲೆಯ ಮುಂದೆ ಕೂಡುವುದು ತಪ್ಪಲ್ಲ ಎನ್ನುವ ಮನೋಭಾವನೆಯಿಂದಾಗಿ, ಪುರುಷ ಕಲಿತರೆ ಅವನು ಉದ್ಯೋಗದಲ್ಲಿ ತೊಡಗಿ ಮನೆಯ ಸದಸ್ಯರನ್ನು ನೋಡಿಕೊಳ್ಳುತ್ತಾನೆ, ಆದರೆ ಮಹಿಳೆ ಕಲಿತರೆ, ಅದರ ಫಲವೆಲ್ಲ ಆಕೆಯ

ಗಂಡನ ಮನೆಯವರಿಗೆ ಸಿಗುತ್ತದೆ. ನಾವು ಕಲಿಸಿದವರಿಗೆ ಏನೂ ದೊರೆಯದು ಎಂಬ ತಂದೆ ತಾಯಿಯರ ನಕಾರಾತ್ಮಕ ಭಾವನೆಯೂ ಹೆಣ್ಣುಮಕ್ಕಳು ಶಿಕ್ಷಣದಿಂದ ವಂಚಿತರಾಗಿರಲು ಕಾರಣವಾಗಿವೆ.

ಶಿಕ್ಷಣವೆನ್ನುವುದು ಪುರುಷನ ಪರವಾಗಿ, ಮಹಿಳೆಯ ವಿರುದ್ಧವಾಗಿಯೇ ನಿಂತಿದೆ. ಪುರುಷನಿಗೆ ವೈಚಾರಿಕ ಶಿಕ್ಷಣ ನೀಡಿದರೆ ಹೆಣ್ಣಿಗೆ ಅನೌಪಚಾರಿಕ, ಸಾಂಪ್ರದಾಯಿಕ ಶಿಕ್ಷಣವನ್ನು ನೀಡುತ್ತಾ ಬಂದಿದೆ, ಒಟ್ಟಾರೆಯಾಗಿ ಶಿಕ್ಷಣವೆನ್ನುವುದು ಈ ಪ್ರದೇಶದ ಮಹಿಳೆಯರ ಪಾಲಿಗೆ ಮರೀಚಿಕೆಯಾಗುತ್ತಲೇ ಇದೆ. ಕೊಳಚೆ ಪ್ರದೇಶದ ಮಹಿಳೆಯರಿಗೆ ಶಿಕ್ಷಣ ಕೊಡಿಸಿ, ಅವಳ ಬದುಕಿನ ಭದ್ರತೆಗೆ ಶಿಕ್ಷಣದ ಬುನಾದಿಯನ್ನು ಹಾಕಬೇಕಾದ ತಂದೆ ತಾಯಿಗಳು, ಮಗಳಿಗೆ ಶಿಕ್ಷಣ ಅವಶ್ಯಕವಿಲ್ಲ, ಅಡುಗೆ ಮಾಡಿಕೊಂಡಿದ್ದರೇ ಸಾಕು, ದುಡಿಯುವ ನಮ್ಮಂಥವರಿಗೆ ಶಿಕ್ಷಣ ಏಕೆ ಬೇಕು ಎನ್ನುವ ಧೋರಣೆ ಇಲ್ಲಿಯ ಜನರದಾಗಿರುವುದರಿಂದ, ಈ ಪ್ರದೇಶದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರು ಶಿಕ್ಷಣದಿಂದ ವಂಚಿತರಾಗಿಯೇ ಉಳಿಯುತ್ತಿದ್ದಾರೆ. ಪ್ರಧಾನಧಾರೆಗೆ ಬರದೆ, ಮನೆಯ ನಾಲ್ಕು ಗೋಡೆಗಳಿಗೆ ಮತ್ತು ದುಡಿಮೆಯ ವಲಯಕ್ಕೆ ಮಾತ್ರ ಸೀಮಿತರಾಗುತ್ತಿದ್ದಾರೆ.

## ೪.೮ ಕೊಳಚೆ ಪ್ರದೇಶದಲ್ಲಿನ ಮಹಿಳಾ ಬದುಕಿನ ಆರೋಗ್ಯಕ ಪರಿಣಾಮಗಳು

'ಆರೋಗ್ಯವೇ ಭಾಗ್ಯ'ವೆಂದು ಹೇಳುವ ಗಾದೆ ಮಾತು ಬಹುಶಃ ಎಲ್ಲಾ ವರ್ಗದ ಎಲ್ಲಾ ವರ್ಣದ ಜನರಿಗೆ ಅನ್ವಯವಾಗುವಂತಹ ಮಾತಾಗಿಲ್ಲ. ಇದು ಕೇವಲ ಮೇಲ್ವರ್ಗದ ಮತ್ತು ಮಧ್ಯಮವರ್ಗದವರಿಗೆ ಮಾತ್ರ ಅನ್ವಯವಾಗುವಂತಹ ಮಾತಾಗಿದೆ. ಏಕೆಂದರೆ ಮೇಲ್ವರ್ಗ ಮತ್ತು ಮಧ್ಯಮವರ್ಗದವರಿಗೆ ಕೆಳವರ್ಗದವರಿಗೆ ಇರುವ ಹಸಿವಿನ ಚಿಂತೆಯಾಗಲಿ, ದುಡಿಮೆಯ ಪ್ರಶ್ನೆಯಾಗಲಿ ಇರುವುದಿಲ್ಲ ಅವರದು ಭದ್ರತೆಯ ಬದುಕು, ಸಮಸ್ಯೆಗಳಿಂದ ಮುಕ್ತವಲ್ಲದಿದ್ದರೂ, ಕೆಳವರ್ಗದವರು ಎದುರಿಸುವ ಸಮಸ್ಯೆಗಳಷ್ಟು, ದೊಡ್ಡದಾಗಿರುವುದಿಲ್ಲ. ಒಟ್ಟಿನಲ್ಲಿ ಹೇಳಬೇಕಾದರೆ ಮೇಲ್ವರ್ಗ, ಮಧ್ಯಮವರ್ಗದ ಮಹಿಳೆಯರು, ವ್ಯವಸ್ಥಿತವಾದ ಮನೆಗಳಲ್ಲಿ ವಾಸಿಸುತ್ತಿದ್ದು, ಪೌಷ್ಠಿಕ ಆಹಾರವನ್ನು ಸೇವಿಸುತ್ತಾರೆ, ಏನಾದರೂ ಕಾಯಿಲೆಗಳಾದರೆ ತಕ್ಷಣವೇ ವೈದ್ಯರ ಬಳಿಗೆ ಹೋಗುತ್ತಾರೆ, ಸೂಕ್ತ ಸಮಯಕ್ಕೆ ಸೂಕ್ತವಾದ ಚಿಕಿತ್ಸೆಯನ್ನು ಪಡೆಯುತ್ತಾರೆ, ಆದರೆ ಕೆಳವರ್ಗದವರೇ ವಾಸಿಸುವ ಕೊಳಚೆ ಪ್ರದೇಶಗಳ ಮಹಿಳೆಯರ ಆರೋಗ್ಯ ಹದಗೆಟ್ಟರೆ ಅವರಿಗೆ ದೊಡ್ಡ ಸಮಸ್ಯೆಯೇ ಎದುರಾಗುತ್ತದೆ. ತಮ್ಮ ಹೊಟ್ಟೆಯನ್ನು ತುಂಬಿಕೊಳ್ಳಲು ದುಡ್ಡು ಇಲ್ಲದಿದ್ದ ಸಮಯದಲ್ಲಿ ಅವರು ದುಡ್ಡು ಕೊಟ್ಟು ತಮ್ಮ ಆರೋಗ್ಯವನ್ನು ನೋಡಿಕೊಳ್ಳುವುದು ಕಷ್ಟದ ಮಾತಾಗಿದೆ.

ಹೀರಾಪೂರ ಈ ಪ್ರದೇಶದಲ್ಲಿ ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದ ಜನರು ಏನೇ ರೋಗ ಬಂದರೂ, ವೈದ್ಯರಿಗೆ ತೋರಿಸದೇ ದೆವ್ವ-ಭೂತ ಬಡಿದಿದೆಯೆಂದು ಮಂತ್ರವಾದಿಗಳಲ್ಲಿ ಕರೆದ್ಯೊಯುವುದು ವಾಡಿಕೆ. ಆಸ್ಪತ್ರೆಗೆ ಹೋಗಿ ಹೆಚ್ಚಿಗೆ ದುಡ್ಡು ಸುರಿಯುವುದಕ್ಕಿಂತ ಮಂತ್ರವಾದಿಯೇ ವಾಸಿ ಎಂದು ಆರೋಗ್ಯದ ಕಡೆಗೆ ನಿರ್ಲಕ್ಷ್ಯವಹಿಸಿ ಬಿಡುತ್ತಾರೆ. ಈ ನಿರ್ಲಕ್ಷ್ಯವೇ ಅನೇಕ ಸಮಸ್ಯೆಗಳಿಗೆ ದಾರಿಮಾಡಿಕೊಡುವುದಲ್ಲದೇ ಹಲವು ಬಾರಿ ಪ್ರಾಣತೆತ್ತ ಉದಾಹರಣೆಗಳು ಈ ಪ್ರದೇಶಗಳಲ್ಲಿ ಕಂಡುಬಂದಿವೆ.

ಪತಿಯ ಭೋಗದ ವಸ್ತುವಾಗಿ ಮಾತ್ರ ಕಾಣಿಸುವ ಮಹಿಳೆ ಅವಳು ಅನುಭವಿಸುವ ಸಂತಾನೋತ್ಪತ್ತಿಯ ಯಾತನೆಯನ್ನು ಪತಿಯ ಅನುಭವಕ್ಕೂ ದೂರ ಇರುವಂತದ್ದು. ಮದುವೆಯಾದ ವರ್ಷದಲ್ಲಿಯೇ ಮಕ್ಕಳನ್ನು ಹೆತ್ತು, ವಯಸ್ಸಿಗೆ ಮುಂಚೆಯೇ ಮುಪ್ಪಾಗುತ್ತಾರೆ. ಈ ಪ್ರದೇಶದಲ್ಲಿರುವ ಪುರುಷರಿಗೆ ಕುಟುಂಬ ಕಲ್ಯಾಣದ ಬಗ್ಗೆಯಾಗಲಿ, ಜನಸಂಖ್ಯಾ ನಿಯಂತ್ರಣದ ಬಗ್ಗೆಯಾಗಲಿ ಯಾವುದೇ ಮಾಹಿತಿ ಇರುವುದಿಲ್ಲ. ಅವರ ಅಜ್ಞಾನದ ಫಲವನ್ನು ಮಹಿಳೆಯರು ಎದುರಿಸುತ್ತಾರೆ. ಆರೋಗ್ಯದ ಬಗ್ಗೆ ತಿಳುವಳಿಕೆಯ ಕೊರತೆಯಿಂದಾಗಿ ಮನೆತುಂಬ ಮಕ್ಕಳನ್ನು ಹೆತ್ತು, ಬಡತನದಲ್ಲಿಯೇ ಮಕ್ಕಳೊಂದಿಗೆ ವಾಸಿಸುವ ಮನೆಗಳು ಇಲ್ಲಿ ಸಾಮಾನ್ಯವಾಗಿವೆ.

ಮಹಿಳೆಯರು ಎದುರಿಸುವ ಅನೇಕ ಆರೋಗ್ಯದ ಸಮಸ್ಯೆಗಳಲ್ಲಿ ಬಾಲ್ಯವಿವಾಹ ಪದ್ಧತಿಯು ಕೂಡ ಅಷ್ಟೇ ಪ್ರಮುಖವಾಗಿದೆ. ಬಾಲ್ಯ ವಿವಾಹ ಪದ್ಧತಿಯು ಒಂದು ಸಾಮಾಜಿಕ ಸಮಸ್ಯೆಯಾಗಿದೆ, ಆದರೆ ಈ ಸಾಮಾಜಿಕ ಸಮಸ್ಯೆಯೇ ಕೊಳಚೆ ಪ್ರದೇಶದ ಮಹಿಳೆಯರ ಅನಾರೋಗ್ಯಕ್ಕೆ ಕಾರಣವಾಗಿರುವುದು ಕ್ಷೇತ್ರಕಾರ್ಯದಿಂದ ತಿಳಿದುಬಂದಿದೆ. ಅಧ್ಯಯನಕ್ಕೊಳಪಟ್ಟ ಕೊಳಚೆ ಪ್ರದೇಶಗಳಲ್ಲಿ ಸಾಮಾನ್ಯವಾಗಿ ಕಂಡುಬಂದಿರುವ ಅಂಶವೆಂದರೆ ಬಾಲ್ಯ ವಿವಾಹ ಪದ್ಧತಿ, ವಯಸ್ಸಿರದ ವಯಸ್ಸಿನಲ್ಲಿ ವಿವಾಹ ಮಾಡಿರುವುದು. ಪ್ರೌಢಾವಸ್ಥೆಯಲ್ಲಿರುವಾಗಲೇ ತಂದೆ ತಾಯಿಗಳು ತಮಗಿಂತಲೂ ವಯಸ್ಸಿನಲ್ಲಿ ಹಿರಿಯವರಾದ ಪುರುಷನೊಂದಿಗೆ ವಿವಾಹ ಮಾಡಿಕೊಡಲಾಗುತ್ತದೆ. ಇನ್ನೂ ಋತುಮತಿಯಾಗಿರದ ಅವಧಿಯಲ್ಲಿ ಮದುವೆಮಾಡಿ, ಋತುಮತಿಯಾದ ಮೇಲೆ ಅವಳು ತಾಯಿಯಾಗಲೂ ಯೋಗ್ಯಳೆಂಬ ಕಾರಣದಿಂದ ಗಂಡನ ಮನೆಗೆ ಕಳಿಸಿಕೊಡುತ್ತಾರೆ. ತಮ್ಮ ಮಗಳನ್ನು ಗಂಡನ ಮನೆಗೆ ಕಳಿಸಿದ ದಿನದಿಂದ 'ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ' ಎನ್ನುವಂತೆ ಅವಳ ಕಡೆ ಗಮನಹರಿಸುವುದೇ ಇಲ್ಲ. ಮದುವೆಯಾದ ಹೊಸತರಲ್ಲಿ ಗಂಡನ ಮನೆಯವರು ಚೆನ್ನಾಗಿ ನೋಡಿಕೊಂಡರು ನಂತರದ ಅವಧಿಯಲ್ಲಿ ಹೆಚ್ಚಿನ ವರದಕ್ಷಿಣೆಯನ್ನು ತರುವಂತೆ ಪೀಡಿಸಲಾಗುತ್ತದೆ. ಗಂಡನ ಮತ್ತು ಗಂಡನ ಸಂಬಂಧಿಕರು ನೀಡುವ ಮಾನಸಿಕ ಮತ್ತು ದೈಹಿಕ ಹಿಂಸೆಗೆ ವಿರೋಧಿಸದೇ ಗಂಡನ ಜೊತೆಯಲ್ಲೇ ಇರುವ ಹೆಣ್ಣುಮಕ್ಕಳು ಈ ಪ್ರದೇಶದಲ್ಲಿ ಇದ್ದಾರೆ. ಗಂಡನಿಂದ, ಆತನ ಸಂಬಂಧಿಕರಿಂದ ಕಿರುಕುಳ ತಾಳಲಾರದೆ ಗಂಡನ ಮನೆ ಬಿಟ್ಟು ಬಂದಂತಹ ಹೆಣ್ಣುಮಕ್ಕಳು ಕೊಳಚೆ ಪ್ರದೇಶದಲ್ಲಿ ಕಂಡುಬರುತ್ತಾರೆ.

ಜಿಲಾನಾಬಾದ ಪ್ರದೇಶದಲ್ಲಿ ಮುಸ್ಲಿಂಮರೇ ಹೆಚ್ಚಿನ ಸಂಖ್ಯೆಯಲ್ಲಿ ವಾಸಿಸುತ್ತಿರುವರು. ಇವರುಗಳೆಲ್ಲ ಕೂಲಿಕೆಲಸವನ್ನೇ ಅವಲಂಬಿತರಾಗಿದ್ದಾರೆ. ಸಂದರ್ಶಿಸಿದ ಮಹಿಳೆಯರೆಲ್ಲರೂ ತಮ್ಮ ಕುಲಕಸುಬಾದ ಚಾಪೆ ಮಾರುವುದನ್ನು ಮುಂದುವರೆಸಿಕೊಂಡು ಬಂದಿದ್ದಾರೆ. ಇವರ ತಂದೆ ತಾಯಿಯರು ಕೂಡ ಈ ಕಸುಬನ್ನು ಮಾಡುತ್ತಿದ್ದು, ತಮ್ಮ ಸಂಬಂಧಿಕರಲ್ಲೇ ಸ್ವಲ್ಪ ಸ್ಥಿತಿವಂತರಿದ್ದ, ಹಣವಂತರಿರುವ ವರನನ್ನು ಹುಡುಕಿ ಮದುವೆ ಮಾಡುತ್ತಾರೆ. ತಮ್ಮ ತಂದೆ, ತಾಯಿಯರ ಒತ್ತಾಯಕ್ಕೆ ಮಣಿದು ಬಾಲ್ಯದಲ್ಲಿಯೇ ಮದುವೆ ಮಾಡಿಕೊಳ್ಳುತ್ತಾರೆ. ಈ ಮಹಿಳೆಯರಿಗೆ ನಿಮ್ಮ ವಿವಾಹ ಎಷ್ಟನೆ ವಯಸ್ಸಿನಲ್ಲಾಯಿತು? ನಿಮ್ಮ ವಯಸ್ಸು ಎಷ್ಟಿತ್ತು? ಎಂದು ಪ್ರಶ್ನೆ ಮಾಡಿದರೆ ಸಿಗುವ ಒಕ್ಕೊರಲಿನ ಉತ್ತರ, ''ನಾನು ತುಂಬಾ ಚಿಕ್ಕವಳಿದ್ದೆ ಇನ್ನೂ

ಋತುಮತಿ ಕೂಡ ಆಗಿದ್ದಿಲ್ಲ ಆವಾಗಲೇ ವಿವಾಹ ಮಾಡಿದರು ಎಂದು ಉತ್ತರಿಸಿದರು." ಬಾಲ್ಯವಿವಾಹದಿಂದಾಗುವ ತೊಡಕಿನ ಬಗ್ಗೆ ಪಾಲಕರಿಗೆ ಮಾಹಿತಿ ಇದ್ದರೂ ಕೂಡ ತಮ್ಮ ಹೆಣ್ಣುಮಕ್ಕಳನ್ನು ಬೇಗ ಮದುವೆ ಮಾಡಿಬಿಟ್ಟರೆ ತಮ್ಮ ತಲೆಯ ಮೇಲಿರುವ ಅರ್ಧಭಾರ ಇಳಿದಂತೆ ಎಂದು ಬೇಗನೆ ಮದುವೆ ಮಾಡಿಬಿಡುತ್ತಾರೆ.

ಬಾಲ್ಯವಿವಾಹಗಳು ಹೆಚ್ಚಾಗಿ ನಡೆಯುವುದರಿಂದ ಮದುವೆ ಎಂದರೇನು? ದಾಂಪತ್ಯ ಜೀವನ ಎಂದರೇನು? ಎಂಬುದರ ಬಗ್ಗೆ ಸಾಮಾನ್ಯವಾದ ಜ್ಞಾನವು ಇಲ್ಲದಂತಹ ಮಹಿಳೆಯರು ಅಧಿಕ ಮಕ್ಕಳನ್ನು ಪಡೆದು ವಯಸ್ಸಿಗೆ ಮುಂಚೆಯೇ ಮುಪ್ಪಾಗುವವರು, ಗರ್ಭಪಾತದಂತಹ ಪರಿಣಾಮಗಳನ್ನು ಎದುರಿಸುವಳು, ಗರ್ಭಪಾತದಿಂದ ೪೨ ದಿನಗಳೊಳಗೆ ಒಂದು ಪಕ್ಷ ಮಹಿಳೆ ಮೃತಪಟ್ಟಲ್ಲಿ, ಅದು ಸಹ ಹೆರಿಗೆ ಸಾವೆಂದು ೧೯೯೭ರಲ್ಲಿ ವಿಶ್ವಸಂಸ್ಥೆ ವಿವರಿಸಿದೆ.

"ಸಾಮಾನ್ಯವಾಗಿ ನಮ್ಮ ಸಮಾಜದಲ್ಲಿ ಮಹಿಳೆಯರಿಗೆ ಸಂತಾನೋತ್ಪತ್ತಿಯ ವಿಷಯದಲ್ಲಿ ಸಂಪೂರ್ಣ ಸ್ವಾತಂತ್ರ್ಯವಿಲ್ಲದಿರುವುದರಿಂದ ಹಾಗೂ ಸಂತಾನ ನಿರೋಧಕ ಕ್ರಮಗಳನ್ನು ಅಳವಡಿಸಿಕೊಳ್ಳುವಲ್ಲಿಯೂ ಆಯ್ಕೆಯಿಲ್ಲದ ಅಸಹಾಯಕತೆಯಿಂದಾಗಿ, ಅವರು ತಮ್ಮ ಪತಿಯ ಕುಟುಂಬ ಬಯಸುವ ಸಂಖ್ಯೆಯ ಹಾಗೂ ಲಿಂಗದ ಮಕ್ಕಳನ್ನು ಹಡೆದ ನಂತರವೇ ಅವರಿಗೆ ಸಂತಾನ ನಿರೋಧ ಶಸ್ತ್ರಚಿಕಿತ್ಸೆ ಮಾಡಿಸಲಾಗುತ್ತದೆ."[೮] ಈ ಮಾತು ಪ್ರತಿಯೊಂದು ಕೊಳಚೆ ಪ್ರದೇಶಗಳಿಗೆ ಅನ್ವಯಿಸುವಂತಹ ಮಾತಾಗಿದೆ. ಬಾಲ್ಯವಿವಾಹ ಪದ್ಧತಿಯು ಒಂದು ಸಾಮಾಜಿಕ ಸಮಸ್ಯೆಯಾಗಿದೆ. ಆದರೂ ಕೂಡ ಈ ಬಾಲ್ಯವಿವಾಹದಿಂದಾಗಿ, ಹೆಣ್ಣುಮಕ್ಕಳು ಬಹುಬೇಗನೆ ಮದುವೆ ಮಾಡಿಕೊಂಡು ಗರ್ಭಧರಿಸಿಬಿಡುತ್ತಾರೆ. ಈ ಮಹಿಳೆಯರಿಗೆ ತಾಯಿಯಾಗಲುಬೇಕಾಗಿರುವ ಮಾನಸಿಕ ಹಾಗೂ ದೈಹಿಕ ಸಾಮರ್ಥ್ಯ ಇಲ್ಲದೇ ಇರುವುದರಿಂದ ಗರ್ಭಪಾತಗಳು, ಗರ್ಭದಲ್ಲಿಯೇ ಮಗುವು ಮರಣ ಹೊಂದುವುದು, ಇವೆಲ್ಲದರಿಂದ ಮಹಿಳೆಯ ಆರೋಗ್ಯವು ತೀರಾ ಅಸ್ವಸ್ಥವಾಗಿರುತ್ತದೆ. ಅನಾರೋಗ್ಯಗಳಿಗೆ ಕಾಲರಾ, ಮಲೇರಿಯಾ, ಟಾಯಿಫೈಡ್ ರೋಗಗಳು ಹೇಗೆ ಕಾರಣವಾಗುತ್ತವೆಯೋ, ಈ ಬಾಲ್ಯ ವಿವಾಹ ಕೂಡ ಅಷ್ಟೆ ಪ್ರಮುಖವಾದ ಕಾರಣವಾಗಿದೆ.

## ೪.೯ ಪ್ರದೇಶದಲ್ಲಿನ ಮಹಿಳಾ ಬದುಕಿನ ಆರ್ಥಿಕ ಪರಿಣಾಮಗಳು

ಅಧ್ಯಯನಕ್ಕೊಳಪಟ್ಟ ಕೊಳಚೆ ಪ್ರದೇಶಗಳ ಮಹಿಳೆಯರು ಮಾಡುವ ಅನೇಕ ಕೆಲಸಗಳನ್ನು ತೆಗೆದುಕೊಂಡರೆ ಅವು ಹೆಚ್ಚಿನಮಟ್ಟಿಗೆ ಶ್ರಮದಾಯಕವಾದ ಕೆಲಸಗಳೇ ಆಗಿವೆ. ಅವರ ಶ್ರಮಕ್ಕೆ ತಕ್ಕ ಪ್ರತಿಫಲ ದೊರೆಯುವುದೇ ಇಲ್ಲ. ಪ್ರತಿಯೊಬ್ಬ ಮಹಿಳೆಯು ಬೆಳಿಗ್ಗೆ ೪.೩೦ರಿಂದ ಸಾಯಂಕಾಲ ೬.೩೦ ಗಂಟೆಯವರೆಗೂ ಹೊರಗೆ ದುಡಿಯುತ್ತಾರೆ. ಮತ್ತು ೭.೦೦ ಗಂಟೆಯಿಂದ ರಾತ್ರಿ ೧೦ ಗಂಟೆಯವರೆಗೂ ಮನೆಯ ಒಳಗೆ ದುಡಿಯುತ್ತಾರೆ.

| | |
|---|---|
| ಗೃಹಕೃತ್ಯ | ೪ ಗಂಟೆ |
| ದುಡಿಮೆ | ೧೫ ಗಂಟೆ |
| ಒಟ್ಟು | ೧೯ ಗಂಟೆಗಳು |

ಒಂದು ದಿನದಲ್ಲಿ ೧೯ ಗಂಟೆಗಳು ಮನೆಯ ಹೊರಗು ಮತ್ತು ಒಳಗೂ ದುಡಿಯುವ ಮಹಿಳೆಯರು, ವಿಶ್ರಾಂತಿ ತೆಗೆದುಕೊಳ್ಳುವುದೇ ಕಡಿಮೆ. ಇಂತಹ ಅವಿರತವಾದ ದುಡಿಮೆಯಿಂದಾಗಿ ಮಾನಸಿಕವಾದ, ದೈಹಿಕವಾದ ರೋಗಗಳಿಗೆ ತುತ್ತಾಗುತ್ತಿದ್ದಾರೆ.

ಮಹಿಳೆಯರು ದುಡಿಯುವ ಶ್ರಮದಾಯಕ ದುಡಿಮೆಗೆ ಸರಿಯಾದ ಕೂಲಿಯು ದೊರೆಯದೇ ಇರುವುದು ವಿಪರ್ಯಾಸದ ಸಂಗತಿಯಾಗಿದೆ. ಸಂವಿಧಾನದಲ್ಲಿ "ಸಮಾನ ಕೆಲಸಕ್ಕೆ ಸಮಾನ ವೇತನ" ಎನ್ನುವ ತತ್ವ ಇದ್ದರೂ, ಈ ತತ್ವ ಕೊಳಚೆ ಪ್ರದೇಶಗಳ ದುಡಿಯುವ ಮಹಿಳೆಯರಿಗೆ ಅನ್ವಯಿಸುವುದಿಲ್ಲ. ದುಡಿಯುವ ಕಾರ್ಮಿಕ ಮಹಿಳೆಯರಿಗಾಗಿ ಅನೇಕ ಕಾರ್ಮಿಕ ಕಾಯ್ದೆಗಳಿದ್ದರೂ ವ್ಯರ್ಥವಾಗಿವೆ. ಇಟ್ಟಂಗಿ ಭಟ್ಟಿಯಲ್ಲಿ ದುಡಿಮೆ ಮಾಡುವವರ ಕಷ್ಟವಂತೂ ಹೇಳತೀರದು. ಸಂದರ್ಶನಕ್ಕೆಂದು ಆಯ್ಕೆಮಾಡಿಕೊಂಡ ಈ ದುಡಿಮೆಗಾರರೆಲ್ಲರೂ ಶ್ರಮದಾಯಕ ಕೆಲಸವನ್ನು ಮಾಡುತ್ತಾರೆ. ಇಲ್ಲಿ ಬೇರೆ ಬೇರೆ ವಿಧಗಳಲ್ಲಿ ಕೆಲಸಗಳಿದ್ದು, ಅವುಗಳಿಗೆ ನಿರ್ದಿಷ್ಟವಾದ ಕೂಲಿಯನ್ನು ನಿಗದಿಪಡಿಸಲಾಗಿದೆ, ಇಟ್ಟಂಗಿಭಟ್ಟಿಯಲ್ಲಿ ದುಡಿಯುವ ಮಹಿಳೆಯರು ನಿರ್ವಹಿಸುವ ನಿರ್ದಿಷ್ಟವಾದ ಕೆಲಸಗಳಿಗೆ ಅಂದರೆ ಇಟ್ಟಂಗಿಯ ಮಣ್ಣನ್ನು ಚೆನ್ನಾಗಿ ಕಲಸಿ ಒಂದು ಹದಕ್ಕೆ ತರುವಂತಹ ಕೆಲಸಕ್ಕೆ ಬೇರೆ ಕೂಲಿ, ಇಟ್ಟಂಗಿಯ ಆಕೃತಿಗೆ ಕೆಸರನ್ನು ತುಂಬಿ, ಹಸಿ ಇಟ್ಟಂಗಿಯನ್ನು ಬಿಸಿಲಿಗೆ ತಂದಿಡುವ ಕೆಲಸಕ್ಕೆ ೧೨೦ ರೂಪಾಯಿಯಂತೆ ಕೂಲಿಯನ್ನು ನಿರ್ಧರಿಸಲಾಗಿದೆ. ಅದೇ ರೀತಿಯಾಗಿ ಬಿಸಿಲಲ್ಲಿ ಒಣಗಿ ಒಂದು ಹಂತಕ್ಕೆ ಬಂದಂತಹ ಇಟ್ಟಂಗಿಗಳನ್ನು ಬೆಂಕಿಗೆ ಹಾಕಿ ಸುಡುವ ಕೆಲಸಕ್ಕೆ ಗೊತ್ತು ಪಡಿಸಿದ ಸ್ಥಳಕ್ಕೆ ಇಟ್ಟಂಗಿಯನ್ನು ರವಾನಿಸುವ ಕೆಲಸಕ್ಕೆ ೩೦ ರೂಪಾಯಿ ಕೂಲಿ, ತಯಾರಾದ ಇಟ್ಟಂಗಿಗಳನ್ನು ಟ್ರ್ಯಾಕ್ಟರಗಾಗಲಿ, ಲಾರಿಗಾಗಲಿ ತುಂಬಿಸಲೂ ಸಹಾಯ ಮಾಡುವವರಿಗೆ ೩೦ರಿಂದ ೫೦ರವರೆಗೆ ಕೂಲಿಯನ್ನು ನಿರ್ಧರಿಸಲಾಗಿದೆ. ಮತ್ತು ಒಂದು ಸಾವಿರ ಇಟ್ಟಂಗಿಯನ್ನು ತಯಾರಿಸಿದರೆ ಸಿಗುವ ಕೂಲಿ ೧೨೦ ರೂಪಾಯಿಗಳು.

ಇಲ್ಲಿ ಕೆಲಸ ಮಾಡುವ ಮಹಿಳೆಯರು ಹೆಚ್ಚಿನ ಶ್ರಮದಾಯಕವಾದ ಕೆಲಸವನ್ನು ಮಾಡುತ್ತಾರೆ. ದಿನದ ೧೫ ಗಂಟೆಗಳನ್ನು ಈ ದುಡಿಮೆಗಾಗಿಯೇ ಮೀಸಲಿಡುತ್ತಾರೆ. ಮಧ್ಯಂತರಕ್ಕಾಗಿ ಅರ್ಧಗಂಟೆಯನ್ನು ಕೊಡುತ್ತಾರೆ. ಹೆಚ್ಚು ಹೊತ್ತು ಕುಳಿತುಕೊಂಡರೆ ಮೇಲಧಿಕಾರಿಗಳಿಂದ ಮಾತುಗಳು ಕೇಳಿ ಬರುತ್ತವೆ. ಹೆಚ್ಚು ಹೊತ್ತು ವಿಶ್ರಾಂತಿ ತೆಗೆದುಕೊಳ್ಳುವ ಹಾಗಿಲ್ಲ. ಧೂಳು, ಮಣ್ಣು, ಬಿಸಿಲು ಎನ್ನದೇ ದುಡಿಯುವ ಮಹಿಳೆಯರು ಆರೋಗ್ಯದ ಅನೇಕ ಸಮಸ್ಯೆಗಳನ್ನು ಎದುರಿಸುತ್ತಾರೆ.

ಜಿಲಾನಾಬಾದನಲ್ಲಿ ದುಡಿಯುವ ಮಹಿಳೆಯರು, ತಮ್ಮ ಕುಲಕಸುಬಾದ ಚಾಪೆ ಮಾರುವುದು ಕೂಡಾ ಶ್ರಮದಾಯಕ ಕೆಲಸವೇ ಆಗಿದೆ. ಮಹಿಳೆಯರ ಗಂಡಂದಿರು ಅಥವಾ ಮಾವಂದಿರು ಮಹಾರಾಷ್ಟ್ರದ ಜಲಗಾಂದಿಂದ ಚಾಪೆಗಳನ್ನು ಖರೀದಿಸಿ ತಂದು ಮಾರಾಟ ಮಾಡುತ್ತಾರೆ. ಬೆಳಿಗ್ಗೆ ಬೇಗ ಹೊರಟು

ಹೋಗುತ್ತಾರೆ. ಬಿಸಿಲಲ್ಲಿ ಬಡಾವಣೆಗಳಿಗೆ, ಅಕ್ಕ ಪಕ್ಕದ ಹಳ್ಳಿಗಳಿಗೆ ಹೋಗಿ ಚಾಪೆಯನ್ನು ಮಾರಾಟ ಮಾಡುತ್ತಾರೆ. ಇವರು ಒಂದು ಚಾಪೆಯಿಂದ ೫ರಿಂದ ೧೦ ರೂಪಾಯಿ ಸಂಪಾದನೆ ಮಾಡುತ್ತಾರೆ. ಚಾಪೆ ಮಾರಲು ಹೊರಡುವ ಮಹಿಳೆಯರಿಗೆ ಎಳೆಯ ಕಂದಮ್ಮಗಳಿದ್ದರೆ ಆ ಕಂದಮ್ಮಗಳನ್ನು ಸೊಂಟಕ್ಕೆ ಕಟ್ಟಿಕೊಂಡು, ರಾತ್ರಿ ಮಿಕ್ಕ ಅಡುಗೆಯನ್ನು ತೆಗೆದುಕೊಂಡು ವ್ಯಾಪಾರ ಮಾಡಲು ಹೊರಡುತ್ತಾರೆ. ಪುರುಷರು ಕೂಡ ವ್ಯಾಪಾರಕ್ಕೆಂದು ಹೊರಡುತ್ತಾರೆ ಆದರೆ ಮಹಿಳೆಯರಿಗಿರುವ ತೊಂದರೆಗಳು ಇವರಿಗಿರುವುದಿಲ್ಲ. ಚಾಪೆಗಳನ್ನೆಲ್ಲ ಗಂಟು ಕಟ್ಟಿ ತಲೆಯ ಮೇಲೆಯೋ ಅಥವಾ ವಾಹನದ ಮೇಲೆ ಇಟ್ಟುಕೊಂಡು ಮಾರಲು ಹೊರಡುತ್ತಾರೆ. ಆದರೆ ಮಹಿಳೆಯರು ಪಡುವ ಪಾಡು ಹೇಳತೀರದು. ಚಾಪೆಗಳನ್ನೆಲ್ಲ ಕಟ್ಟಿಕೊಂಡು, ತಲೆಯ ಮೇಲೆ ಚಾಪೆಯ ಗಂಟು ಹೊತ್ತು, ಕಂಕುಳಲ್ಲಿ ಮಗುವನ್ನಿಟ್ಟುಕೊಂಡು ವ್ಯಾಪಾರಕ್ಕೆ ಹೊರಡುತ್ತಾರೆ. ಪುರುಷರು ದುಡಿದ ಹಣ ನೇರವಾಗಿ ಸರಾಯಿ ಅಂಗಡಿಗೆ, ಅವರ ಕೆಟ್ಟಚಟಗಳಿಗೆ ಖರ್ಚಾದರೆ, ಮಹಿಳೆಯರು ಒಂದು ದಿನದಲ್ಲಿ ಬಂದ ಲಾಭದಲ್ಲಿ ಮನೆಗೆ ಬೇಕಾಗುವ ದಿನಸಿ ಪದಾರ್ಥಗಳನ್ನು ಖರೀದಿಸಿಕೊಂಡು ಬರುತ್ತಾರೆ. ಒಂದು ಚಾಪೆಯಿಂದ ೫ ರಿಂದ ೧೦ ರೂಪಾಯಿ. ಇಡೀ ದಿನದ ವ್ಯಾಪಾರ ೫೦ರಿಂದ ೭೦ ರೂಪಾಯಿವರೆಗೆ ವ್ಯಾಪಾರ ಮಾಡಿಕೊಂಡು ಬರುತ್ತಾರೆ.

ಡಾ.ಬಿ.ಆರ್.ಅಂಬೇಡ್ಕರ್ ಆಶ್ರಯ ಕಾಲೋನಿಯು ಅನೇಕ ಜಾತಿ ಮತ ಪಂಥದವರು ವಾಸಿಸುವ ಪ್ರದೇಶವಾಗಿದೆ. ಈ ಪ್ರದೇಶಕ್ಕೆ ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿಯ ವತಿಯಿಂದ ಮನೆಗಳನ್ನು ಕಟ್ಟಿಕೊಡಲಾಗಿದೆ. ವಿದ್ಯುತ್ ಸೌಲಭ್ಯವನ್ನು ಕೂಡ ಒದಗಿಸಿದೆ. ಇಲ್ಲಿ ಮೂರು ಸ್ವಸಹಾಯ ಗುಂಪುಗಳಿದ್ದು, ಕೂಡಿಟ್ಟಂತಹ ಹಣದಲ್ಲಿ ಉಳಿತಾಯ ಮಾಡುವ ಉದ್ದೇಶವನ್ನು ಹೊಂದಿದ್ದಾರೆ. ಈ ಪ್ರದೇಶದಲ್ಲಿ ಸಂದರ್ಶಿಸಲ್ಪಟ್ಟ ಮಹಿಳೆಯರೆಲ್ಲರು ದುಡಿಮೆಯನ್ನು ಮಾಡುವವರಾಗಿದ್ದಾರೆ. ಗುತ್ತಿಗೆಯ ಆಧಾರದ ಮೇಲೆ ಬಟ್ಟೆಗಳನ್ನು ಮನೆಗೆ ತಂದು, ಅವನ್ನು ಸರಿಯಾದ ರೀತಿಯಲ್ಲಿ ಜೋಡಿಸಿ ತಯಾರು ಮಾಡಿ, ತಯಾರಾದ ಮೇಲೆ ಅಂಗಡಿಗೆ ತೆಗೆದುಕೊಂಡು ಹೋಗಿ ಕೊಟ್ಟು ಬರುತ್ತಾರೆ. ಈ ರೀತಿಯಾಗಿ ಬಟ್ಟೆಗಳನ್ನು ತಯಾರು ಮಾಡುವುದರಿಂದ ಅವರು ಒಂದು ಡಜನ್ ಬಟ್ಟೆಯಿಂದ ಸುಮಾರು ೩೦ ರಿಂದ ೪೦ರವರೆಗೆ ಲಾಭವನ್ನು ಪಡೆಯುತ್ತಾರೆ. ಆದರೆ ಈ ಆದಾಯದಿಂದ ಅವರ ಕುಟುಂಬದ ಹೊಟ್ಟೆ ತುಂಬುವುದು ಕಷ್ಟವೇ ಆಗಿದೆ. ಈ ಬಟ್ಟೆಗಳನ್ನು ತಯಾರಿಸಲು ಬೆಳಿಗ್ಗೆಯಿಂದ ಸಾಯಂಕಾಲದವರೆಗೂ ದುಡಿದರು ಅವರ ಶ್ರಮಕ್ಕೆ ತಕ್ಕ ಪ್ರತಿಫಲ ದೊರೆಯುವುದೇ ಇಲ್ಲ. ಇಲ್ಲಿ ಬಂಡವಾಳಶಾಹಿಗಳು ಇಂತಹ ಮಹಿಳೆಯರಿಂದ ಕಡಿಮೆ ಕೂಲಿಯನ್ನು ಕೊಟ್ಟು ದುಡಿಸಿಕೊಳ್ಳುತ್ತಾರೆ, ಅದರಿಂದ ಬಂದ ಅಧಿಕ ಲಾಭವನ್ನು ತಾವು ತೆಗೆದುಕೊಳ್ಳುತ್ತಾರೆ, ಇಲ್ಲಿ ಮತ್ತೆ ಉಳ್ಳವರು ಹೆಚ್ಚಿಗೆ ಹಣವನ್ನು ಪಡೆಯುತ್ತಾ ಶ್ರೀಮಂತರಾಗುತ್ತಾ ಹೋಗುತ್ತಿದ್ದಾರೆ, ಬಡವರು ಬಡವರಾಗಿಯೇ ಉಳಿಯುತ್ತಿದ್ದಾರೆ ಎಂಬುದು ವಿಪರ್ಯಾಸದ ಸಂಗತಿಯೇ ಆಗಿದೆ. ಇನ್ನೂ ಕೆಲವು ಮಹಿಳೆಯರು ಪಾತ್ರೆಗಳನ್ನು ಮಾರುವ ಉದ್ಯೋಗವನ್ನು ಮಾಡುತ್ತಾರೆ. ಇವರು ಪಾತ್ರೆಗಳನ್ನೆಲ್ಲ ಹೋಲ್‌ಸೇಲ್‌ಗಳಿಂದ ಖರೀದಿಸಿ ತೆಗೆದುಕೊಂಡು ಬರುತ್ತಾರೆ. ತಾವು ತರುವಂತಹ

ಪಾತ್ರೆಗಳಲ್ಲಿ ಅಲ್ಯೂಮಿನಿಯಂ ಮತ್ತು ಸ್ಟೀಲ್ ಪಾತ್ರೆಗಳು ಪ್ರಮುಖವಾಗಿವೆ. ಬಡಾವಣೆಗಳಿಂದ ಬಡಾವಣೆಗಳಿಗೆ, ಹಳ್ಳಿಗಳಿಂದ ಹಳ್ಳಿಗಳಿಗೆ ಕೆಲವೊಂದು ಜಾತ್ರೆಗಳಿಗೆ ಹೋಗಿ ಮಾರಾಟ ಮಾಡುತ್ತಾರೆ. ಒಂದು ಪಾತ್ರೆಗೆ ೧೦ರಿಂದ ೩೦ರವರೆಗೆ ಲಾಭ ಬಂದರೆ, ಒಂದು ದಿನಕ್ಕೆ ೧೦೦ರಿಂದ ೨೦೦ರವರೆಗೆ ಲಾಭ ಬರುತ್ತದೆ ಎಂದು ಸಂದರ್ಶಿಸಿದಾಗ ತಿಳಿದು ಬಂದ ಸಂಗತಿಯಾಗಿದೆ. ಈ ಮಹಿಳೆಯರು ಬೇಸಿಗೆ ಮತ್ತು ಚಳಿಗಾಲದಲ್ಲಿ ಮಾರಾಟ ಮಾಡಲು ಹೋಗುತ್ತಾರೆ. ಮಳೆಗಾಲದಲ್ಲಿ ತಮ್ಮ ಮನೆಯಲ್ಲಿಯೇ ಪಾತ್ರೆಗಳನ್ನು ಮಾರುತ್ತಾರೆ. ಇವರು ಬೆಳಗ್ಗೆಯಿಂದ ಸಂಜೆಯವರೆಗೂ ಹೊರಗೆ ಇರುವುದರಿಂದ ಬಿಸಿಲಿಗೆ, ಚಳಿಗೆ ಕಲುಷಿತವಾದ ವಾತಾವರಣಕ್ಕೆ, ಕಲುಷಿತವಾದ ನೀರು ಕುಡಿಯುವುದರಿಂದ, ಅನೇಕ ರೋಗಗಳನ್ನು ಆಹ್ವಾನಿಸಿಕೊಳ್ಳುತ್ತಾರೆ. ತಮ್ಮ ಆರೋಗ್ಯ ಕೈಕೊಟ್ಟಿತೆಂದರೆ ಆಸ್ಪತ್ರೆಗೆ ತೋರಿಸಿಕೊಳ್ಳುವುದಿಲ್ಲ, ಬದಲಿಗೆ ಅವರ ಮನೆಯ ದೇವತೆಯ ಹೆಸರಿನಲ್ಲಿ ಭಂಡಾರ ಹಚ್ಚಿಕೊಳ್ಳುವ, ಹರಕೆ ಹೊತ್ತುಕೊಳ್ಳುವ ವಾಡಿಕೆ ಇವರಲ್ಲಿ ಕಂಡುಬರುತ್ತದೆ.

ಬುದ್ಧ ನಗರದಲ್ಲಿ ಸಂದರ್ಶಿಸಿದ ಮಹಿಳೆಯರಲ್ಲಿ ಆರು ಜನ ಮಹಿಳೆಯರು ದುಡಿಮೆ ಮಾಡುತ್ತಿದ್ದಾರೆ. ಇಬ್ಬರು ಮಹಿಳೆಯರು ಮನೆ ಕೆಲಸ ಮಾಡುತ್ತಿದ್ದು ಉಳಿದ ಮಹಿಳೆಯರು ಕಸ ಗುಡಿಸುವುದಲ್ಲದೇ, ಗುತ್ತಿಗೆಯ ಆಧಾರದ ಮೇಲೆ ಬಟ್ಟೆಗಳನ್ನು ತಯಾರಿಸುತ್ತಾರೆ(ಹೊಲಿಯುತ್ತಾರೆ), ಬಿಸಿಲು, ಗಾಳಿ ಎನ್ನದೇ ಪುರಸಭೆಯಲ್ಲಿ ಕಸ ಗುಡಿಸುವ ಕೆಲಸ ಮಾಡುತ್ತಾರೆ. ಶ್ರಮವಹಿಸಿ ಕಷ್ಟಪಟ್ಟು ದುಡಿಯುವ, ಮನೆಯ ಜವಾಬ್ದಾರಿಗಳೆಲ್ಲವನ್ನೂ ಹೊತ್ತುಕೊಂಡು ದುಡಿಯುವ ಮಹಿಳೆಯರಿಗೆ ಇಲ್ಲಿ ಕೊರತೆ ಇಲ್ಲ. ಆದರೆ ಇಲ್ಲಿರುವ ಪುರುಷರು ಮಾತ್ರ ದುಡಿಯದೇ ತಮ್ಮದೇ ಆದ ಗುಂಪುಗಳನ್ನು ಕಟ್ಟಿಕೊಂಡು ಒಂದು ಪಕ್ಷದ ಜೊತೆ ತಮ್ಮ ಸಂಬಂಧವನ್ನು ಬೆಳೆಸಿ ಚುನಾವಣೆಯ ಸಂದರ್ಭದಲ್ಲಿ ನಾಯಕತ್ವ ವಹಿಸುವುದು, ಸತ್ಯಾಗ್ರಹಗಳು, ಧರಣಿಗಳು ನಡೆದಾಗ ಅವುಗಳೊಂದಿಗೆ ಸಹಭಾಗಿತ್ವ ವಹಿಸುತ್ತಾರೆ. ಅವರಿಗೆ ಸಮಾಜದ ಬಗ್ಗೆ ಇರುವ ಪ್ರೀತಿ, ಕಾಳಜಿ, ವ್ಯಾಮೋಹ, ಮನೆಯ ಮಾತಿಗೆ ಸುಳ್ಳಾಗಿದೆ. ಈ ನಗರದಲ್ಲಿ ಪದವಿ, ಸ್ನಾತಕೋತ್ತರ ಶಿಕ್ಷಣವನ್ನು ಪಡೆದಂತಹ ಪುರುಷರು ಇದ್ದಾರೆ. ಉಳಿದ ನಗರಗಳಿಗೆ ಹೋಲಿಸಿದರೆ ಈ ನಗರದಲ್ಲಿರುವ ಶಿಕ್ಷಣ ಮಟ್ಟ ಉತ್ತಮವಾಗಿದೆ. ಆದರೆ ಈ ಪುರುಷರಿಗೆ ಸರ್ಕಾರದಿಂದ ಯಾವುದೇ ಉದ್ಯೋಗ ದೊರೆತಿಲ್ಲ, ಇದೇ ಕಾರಣವನ್ನು ಮುಂದಿಟ್ಟುಕೊಂಡು ಅನೇಕ ಪುರುಷರು ದುಡಿಯಲು ಹೋಗದೇ ಇತ್ತ ಉದ್ಯೋಗಕ್ಕೆ ಪ್ರಯತ್ನವನ್ನು ಪಡದೇ ಕುಡಿತಕ್ಕೆ ದಾಸರಾಗಿ, ತಾಯಿ ಮತ್ತು ಹೆಂಡತಿಯ ಜೊತೆ ಜಗಳ ಕಾಯುವುದು ಇಲ್ಲಿ ಸಾಮಾನ್ಯವಾಗಿದೆ. ಈ ಪ್ರದೇಶದಲ್ಲಿ ಪುರುಷನು ಮನೆಯ ಜವಾಬ್ದಾರಿಗಳಿಂದ ನುಣುಚಿಕೊಡು, ದುಡಿಮೆಯನ್ನು ಮಾಡದೇ ತಾಯಿ ಅಥವಾ ಹೆಂಡತಿಯ ದುಡಿಮೆಯ ಹಣವನ್ನು ತಮ್ಮ ಕೆಟ್ಟ ಚಟಗಳಿಗೆ ಬಳಸಿಕೊಳ್ಳುತ್ತಿರುವುದನ್ನು ಕ್ಷೇತ್ರಕಾರ್ಯದಿಂದ ತಿಳಿದ ಮಾಹಿತಿಯಾಗಿದೆ.

**ಕಾರ್ಖಾನೆಗಳಲ್ಲಿ ದುಡಿಯುವ ಮಹಿಳೆಯರಿಗಿರುವ ಕಾಯ್ದೆಯ ಸೌಲಭ್ಯಗಳು**

ಅಸಂಘಟಿತ ವಲಯಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರಿಗಾಗಿಯೇ ರಚಿಸಲಾಗಿರುವಂತಹ ಕಾರ್ಖಾನೆಯ ಕಾಯ್ದೆಗಳು ಮಹಿಳಾ ಕಾರ್ಮಿಕರ ಹಿತ ದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ಅವರಿಗಾಗಿಯೇ ಕೆಲವೊಂದು ಕಾಯ್ದೆಗಳನ್ನು ಜಾರಿಗೆ ತರಲಾಗಿದೆ ಈ ಕಾಯ್ದೆಗಳನ್ನು ಹೀಗೆ ಗುರುತಿಸಬಹುದಾಗಿದೆ. ಕೊಳಚೆ ಪ್ರದೇಶದ ಮಹಿಳೆಯರು ಈ ಬಗೆಯ ಕಾರ್ಖಾನೆಗಳಲ್ಲಿ ತಮ್ಮ ದೈನಿಕ ಕೂಲಿ ಕೆಲಸ ಇತ್ಯಾದಿಗಳಿಗಾಗಿ ಅವಲಂಬಿಸಿರುವುದರಿಂದ ಕಾರ್ಖಾನೆಗಳಲ್ಲಿ ದುಡಿವ ಮಹಿಳೆಯರಿಗೆ ಇರುವ ಕಾನೂನು ಸೌಲಭ್ಯಗಳ ಮಾಹಿತಿಯನ್ನು ಈ ಕೆಳಗಿನಂತೆ ಒದಗಿಸಲಾಗಿದೆ.

**೧. ಮಹಿಳೆಯರು ದುಡಿಯುವ ಕೆಲಸದ ವೇಳೆ**

೧೯೪೮ರ ಕಾರ್ಖಾನೆಗಳ ಕಾಯ್ದೆ, ೧೯೫೨ರ ಗಣಿಗಳ ಕಾಯ್ದೆ ಮತ್ತು ೧೯೫೧ರ ತೋಟಗಳ ಕಾಯ್ದೆ ಇವುಗಳು ಮಹಿಳೆಯರನ್ನು ರಾತ್ರಿ ೭ ಗಂಟೆಯಿಂದ ಬೆಳಿಗ್ಗೆ ೬ ಗಂಟೆಯ ಅಂತರದಲ್ಲಿ ಉದ್ಯೋಗದಲ್ಲಿ ತೊಡಗುವುದನ್ನು ನಿಷೇಧಿಸಿದೆ. ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಗಣಿ ಮತ್ತು ಕಾರ್ಖಾನೆಗಳಲ್ಲಿ ಮಹಿಳೆಯರು ಬೆಳಗಿನ ಜಾವ ೫ ಗಂಟೆಯಿಂದ ರಾತ್ರಿ ೧೦ ಗಂಟೆಯವರೆಗೆ ಕೆಲಸ ಮಾಡಲು ಅನುಮತಿಯಿದೆ.’

**೨. ಆರೋಗ್ಯ ಮತ್ತು ಭದ್ರತೆ**

“ಕಾರ್ಮಿಕ ಕಾಯ್ದೆಗಳು ಮಹಿಳಾ ಕಾರ್ಮಿಕರು ಎತ್ತಬೇಕಾದ ಗರಿಷ್ಠ ಭಾರವನ್ನು ನಿಗದಿಪಡಿಸಿದೆ, ಕಾರ್ಖಾನೆಗಳಲ್ಲಿ ಉದ್ಯೋಗದಲ್ಲಿರುವ ಮಹಿಳಾ ಕಾರ್ಮಿಕರಲ್ಲಿ ಯುವತಿಯರು ಗರಿಷ್ಠ ೬೫ ಪೌಂಡುಗಳನ್ನು, ಕಿಶೋರಿಯರು ೪೫ ಪೌಂಡುಗಳನ್ನು ಮತ್ತು ಮಕ್ಕಳು ೩೦ ಪೌಂಡುಗಳನ್ನು ಎತ್ತಬಹುದು.”[೧೦]

“ಕಾರ್ಖಾನೆಗಳ ಕಾಯ್ದೆಯ ೮೭ನೇ ವಿಧಿಯು ಮಹಿಳೆಯರನ್ನು ಅಪಾಯಕಾರಿಯಾಂದಂತಹ ಕೆಲಸಗಳಲ್ಲಿ ತೊಡಗಿಸುವುದನ್ನು ನಿಷೇದಿಸುವ ಅಧಿಕಾರವನ್ನು ರಾಜ್ಯ ಸರಕಾರಕ್ಕೆ ಕೊಟ್ಟಿದೆ. ಈ ವಿಧಿಯ ಅನ್ವಯ ಅತಿ ಭಾರವಾದಂತಹ ವಸ್ತುಗಳನ್ನು ಎತ್ತುವುದು ನಿಷೇಧಿಸಿರುವುದರಿಂದ ಮಹಿಳಾಕಾರ್ಮಿಕರಿಗೆ ಅಪಾಯಕರ ಕೆಲಸಗಳಾಗಲಿ, ಅತಿ ಭಾರವನ್ನು ಎತ್ತುವುದಾಗಲಿ ನಿಷೇಧ ಮಾಡಲಾಗಿದೆ. ಅದೇ ರೀತಿಯಾಗಿ ಮಹಿಳಾ ಕಾರ್ಮಿಕರಿಗೆ ಪ್ರತ್ಯೇಕ ಮೂತ್ರ ಮತ್ತು ಶೌಚಗ್ರಹಗಳಿರಬೇಕೆಂದು ಕಾಯ್ದೆ ನಮೂದಿಸಿದೆ. ಕಾರ್ಖಾನೆಗಳ ಕಾಯ್ದೆಯ ಪ್ರಕಾರ ನಿಯೋಜಕರು ಮಹಿಳೆಯರಿಗೆ ಪ್ರತ್ಯೇಕ ಶೌಚಗ್ರಹಗಳನ್ನು ಕಟ್ಟಿಕೊಡಬೇಕೆಂದು ಕಾಯ್ದೆ ಕಡ್ಡಾಯ ಮಾಡಿದೆ.”[೧೧]

ಮಹಿಳಾ ಕಾರ್ಮಿಕರಿಗೆ ಪ್ರತ್ಯೇಕವಾದ ಶೌಚಗ್ರಹಗಳಿರಬೇಕೆಂದು ಕಾಯ್ದೆಯಲ್ಲಿ ನಮೂದಾಗಿದ್ದರೂ ಕೂಡ ಕೆಲವೊಂದು ಕಾರ್ಖಾನೆಗಳಲ್ಲಿ, ಗೋದಾಮುಗಳಲ್ಲಿ ಮತ್ತು ಇಟ್ಟಂಗಿ ತಯಾರಿಸುವ, ಸುಣ್ಣವನ್ನು ತಯಾರಿಸುವ ಭಟ್ಟಿಗಳಲ್ಲಿ ಮಾತ್ರ ಬಯಲು ಪ್ರದೇಶವೇ ಅವರ ಶೌಚಗ್ರಹ, ಶೌಚಗ್ರಹವಿಲ್ಲದೇ

ಪರದಾಡುವಂತಹ ಪರಿಸ್ಥಿತಿ ಇದೆ. ಬಯಲು ಪ್ರದೇಶವನ್ನು, ಹಳೆಯ ಕಟ್ಟಡಗಳನ್ನು ಮತ್ತು ಗಿಡ, ಗಂಟಿಗಳನ್ನು ಶೌಚಗ್ರಹಗಳಾಗಿ ಆಶ್ರಯಿಸುತ್ತಾರೆ. ಶೌಚಗ್ರಹವಿಲ್ಲದೇ ಇರುವುದರಿಂದ ಮಹಿಳೆಯರ ಮಾಸಿಕ ಕ್ರಿಯೆಯ ಸಂದರ್ಭದಲ್ಲಿ ಮಾನಸಿಕವಾಗಿ ತುಂಬಾ ಹಿಂಸೆಯನ್ನು ಅನುಭವಿಸಬೇಕಾಗುತ್ತದೆ. ಶೌಚಗ್ರಹ ಇರಬೇಕೆಂಬ ಕಾರ್ಖಾನೆಗಳ ಕಾಯ್ದೆಯು ಕೇವಲ ಕಾಯ್ದೆಯಾಗಿಯೇ ಉಳಿದಿದೆ. ಕೆಲವೊಂದು ಕಡೆ ಜಾರಿಗೆ ಬಂದರೆ ಇನ್ನು ಕೆಲವೆಡೆ ಜಾರಿಗೆ ಬರದೇ ಇರುವುದು ವಿಪರ್ಯಾಸದ ಸಂಗತಿಯಾಗಿದೆ.

**೩. ಹೆರಿಗೆಯ ಸೌಲಭ್ಯಗಳು**

"೧೯೬೧ರ ಹೆರಿಗೆ ಸೌಲಭ್ಯಗಳ ಕಾಯ್ದೆ, ೧೯೪೮ರಲ್ಲಿ ಕಾರ್ಮಿಕರ ವಿಮಾ ಕಾಯ್ದೆ, ೧೯೪೮ರ ಕಾರ್ಖಾನೆಗಳ ಕಾಯ್ದೆಗಳು, ಗಣಿಗಳಲ್ಲಿ ಕೆಲಸ ಮಾಡುವ ಮಹಿಳಾ ಕಾರ್ಮಿಕರ ಮತ್ತು ಗರ್ಭಿಣಿ ಮಹಿಳಾ ಕಾರ್ಮಿಕರಿಗಾಗಿ ಅವಕಾಶ ಮಾಡಿರುವ ಸೌಲಭ್ಯಗಳು ಇಂತಿವೆ.

೧. ವೇತನ ಅಥವಾ ಕೂಲಿ ಸಹಿತ ಹೆರಿಗೆ ಪೂರ್ವ ಆರುವಾರಗಳು ಮತ್ತು ಹೆರಿಗೆ ನಂತರ ಆರು ವಾರಗಳ ಹೆರಿಗೆ ರಜಾ ಸೌಲಭ್ಯ

೨. ಪೂರ್ವ ಶೈಶಾವಸ್ಥೆ ಮತ್ತು ಶೈಶಾವೋತ್ತರಾವಸ್ಥೆಯಲ್ಲಿ ಉಚಿತ ವೈದ್ಯಕೀಯ ಸೌಲಭ್ಯ ನೀಡದಿದ್ದಲ್ಲಿ ಅಂತಹ ಮಹಿಳಾ ಕಾರ್ಮಿಕರಿಗೆ ವೈದ್ಯಕೀಯ ಬೋನಸ್ ನೀಡಬೇಕು.

೩. ಗರ್ಭಾವಸ್ಥೆಯಲ್ಲಿ ಗರ್ಭಕ್ಕೆ ಅಥವಾ ಆರೋಗ್ಯಕ್ಕೆ ಹಾನಿಕಾರಕವಾಗುವ ತ್ರಾಸದಾಯಕ ಕೆಲಸ ಮಾಡುವಂತೆ ಒತ್ತಾಯಿಸಬಾರದು.

೪. ಗರ್ಭಿಣಿಯಾದ್ದರಿಂದಾದ ಹೆರಿಗೆ, ಗರ್ಭಪಾತ, ಗರ್ಭದಲ್ಲಿ ಮಗುವಿನ ಸಾವುಂಟಾದಾಗ ಆರು ವಾರಗಳ ಹೆರಿಗೆಯ ನಂತರ ರಜೆಯನ್ನು ಇನ್ನೊಂದು ತಿಂಗಳು ವಿಸ್ತರಿಸಬಹುದು.

೫. ಹೆರಿಗೆ ರಜೆ ವೇಳೆಯಲ್ಲಿ ಮಹಿಳಾ ಕಾರ್ಮಿಕಳನ್ನು ಕೆಲಸದಿಂದ ವಜಾ ಮಾಡಬಾರದು."[೨]

ಈ ಎಲ್ಲ ಸೌಲಭ್ಯಗಳು ಗರ್ಭಿಣಿ ಮಹಿಳೆಗೆ ದೊರೆಯಬೇಕೆಂದು ಕಾಯ್ದೆಗಳಿದ್ದರೂ ಕೂಡ ಕಾರ್ಖಾನೆಗಳಲ್ಲಿ ಈ ಸೌಲಭ್ಯಗಳು ದೊರೆಯುವುದಿಲ್ಲ. ಬದಲಿಗೆ ಗರ್ಭವತಿಯಾದ ದಿನದಿಂದ ಹಿಡಿದು ಹೆರಿಗೆಯಾಗುವ ದಿನದವರೆಗೂ ಗರ್ಭಿಣಿಗೆ ರಜೆಯನ್ನು ನೀಡಲಾಗುತ್ತದೆ. ಯಾವುದೇ ರೀತಿಯ ಸೌಲಭ್ಯಗಳಾಗಲಿ, ಹೆರಿಗೆ ರಜೆಯಾಗಲಿ, ವೇತನವಾಗಲಿ ದೊರೆಯುವುದಿಲ್ಲ. ಈ ದಿನಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರಿಗೆ ಭಯದ, ಅಭದ್ರತೆಯ ವಾತಾವರಣ ನಿರ್ಮಿತವಾಗಿರುತ್ತದೆ. ಹೆರಿಗೆಯ ಸಂದರ್ಭದಲ್ಲಿ ಅವರು ಅವಲಂಬಿಸಿರುವ ಉದ್ಯೋಗದಲ್ಲಿ ಅಭದ್ರತೆಯಿರುತ್ತದೆ. ಉದ್ಯೋಗವನ್ನು ಕಳೆದುಕೊಳ್ಳುವ ಸಂಭವವಿರುತ್ತದೆ.

## ಟಿಪ್ಪಣಿಗಳು

೧. ಚಂದ್ರಶೇಖರ್ ಟಿ.ಆರ್. : ಮಹಿಳೆ ಆರ್ಥಿಕತೆ ಮತ್ತು ಅಭಿವೃದ್ಧಿ : ೨೦೦೧, ಪುಟ ೭೧

೨. ಹೇಮಲತಾ ಎಚ್.ಎಂ. : ಮಹಿಳಾ ಅಧ್ಯಯನ : ೨೦೦೪, ಪುಟ ೨೪

೩. ಶ್ರೀಮತಿ ಎಚ್.ಎಸ್. : ಸ್ತ್ರೀವಾದ : ೨೦೦೩, ಪುಟ ೩೬

೪. ಅದೇ, ಪುಟ ೩೮

೫. ಉಷಾ ಎಂ. : ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು : ೨೦೦೪, ಪುಟ ೪೦, ೪೧

೬. ಚಂದ್ರಶೇಖರ ಟಿ.ಆರ್.: ಮಹಿಳೆ ಆರ್ಥಿಕತೆ ಮತ್ತು ಅಭಿವೃದ್ಧಿ : (ಪ್ರ) ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧, ಪುಟ ೬೩

೭. ಮೈತ್ರೇಯಿ ಮುಖ್ಯೋಪಾಧ್ಯಾಯ : ಬೆಳ್ಳಿಯ ಸಂಕೋಲೆಗಳು : (ಅನು) ವೈದೇಹಿ, ೧೯೮೫, ಪುಟ ೫೭

೮. ಸರೋಜ ಕೆ. : ಮಹಿಳೆ ಮತ್ತು ಆರೋಗ್ಯ : ಕ.ವಿ.ವಿ. ಹಂಪಿ, ೨೦೦೧, ಪುಟ ೧೦೮

೯. ನಾರಾಯಣಮಿಶ್ರ ಎಂ. : ಸಾಮಾಜಿಕ ಸಮಸ್ಯೆಗಳು : ಪುಟ ೩೨೦, ೩೨೧

೧೦. ಅದೇ

೧೧. ಅದೇ

೧೨. ಅದೇ

## ಅಧ್ಯಾಯ : ೫

# ಸಮಾರೋಪ

೫.೧ ಅಧ್ಯಯನದ ಸಮೀಕ್ಷೆ

೫.೨ ಅಧ್ಯಯನದ ಫಲಿತಗಳು

೫.೩ ಸಲಹೆಗಳು

# ಅಧ್ಯಾಯ : ಐದು

# ಸಮಾರೋಪ

## ೫.೧ ಅಧ್ಯಯನದ ಸಮೀಕ್ಷೆ

ಭಾರತದಲ್ಲಿ ಅತ್ಯಂತ ಪ್ರಾಚೀನ ಕಾಲದಿಂದಲೂ ಬೆಳೆದು ಬಂದಿರುವಂತಹ ರೂಢಿಗಳು, ಸಂಪ್ರದಾಯಗಳು, ಆಚರಣೆಗಳು ಇವೆಲ್ಲವುಗಳು, ಮಹಿಳೆಯರ ಬದುಕಿನ ಮೇಲೆ ಅತ್ಯಂತ ಗಾಢವಾದ ಪರಿಣಾಮಗಳನ್ನು ಬೀರಿವೆ. ಸಂಪ್ರದಾಯಗಳು, ನಂಬಿಕೆಗಳೆಲ್ಲವು ಮಹಿಳೆಯರನ್ನು ದ್ವಿತೀಯ ದರ್ಜೆಯಲ್ಲಿಟ್ಟು ಅವಳ ಅಸ್ತಿತ್ವದ ಹುಡುಕಾಟಕ್ಕೆ ದಾರಿ ಮಾಡಿಕೊಡದಂತೆ, ಪ್ರತಿಯೊಂದು ಸಂದರ್ಭದಲ್ಲಿಯೂ ಕಡಿವಾಣವನ್ನು ಹಾಕುತ್ತಾ ಬರಲಾಗಿದೆ. ಹೆಣ್ಣನ್ನು ಯಾವಾಗಲು ಅಧಿಕಾರವಿಲ್ಲದ, ಅಧೀನವಾದ, ಪರಾವಲಂಬಿಯಾಗಿ, ರಕ್ಷಣೆಯನ್ನು ಪಡೆಯುವವಳಾಗಿಯೇ ಕಾಣುತ್ತಾ ಬರಲಾಗಿದೆ. ಹೆಣ್ಣಿಗೆ ಅವಳದೇ ಆದ ವ್ಯಕ್ತಿತ್ವವಿಲ್ಲದೆ ಸದಾ ಪುರುಷನಿಂದ ತನ್ನ ವ್ಯಕ್ತಿತ್ವ ಮತ್ತು ಅಸ್ತಿತ್ವವನ್ನು ಗುರುತಿಸುವಂತಾಗಿದೆ. ಪುರುಷ ಪ್ರಾಬಲ್ಯವಿರುವ ಸಮಾಜವು ಹೆಣ್ಣಿಗೆ ಯಾವುದೇ ರೀತಿಯ ಮಹತ್ವ ನೀಡಿಲ್ಲ ಬದಲಿಗೆ ಸಂಪ್ರದಾಯಗಳ ಹೆಸರಿನಲ್ಲಿ ಎಷ್ಟು ಸಾಧ್ಯವೋ ಅಷ್ಟು ಅವಳ ಮೇಲೆ ಬಂಧನವನ್ನು ಹೇರುತ್ತಾ ಬರಲಾಗಿದೆ.

ಸಾಮಾಜಿಕ ಮೌಲ್ಯಗಳೆನಿಸಿದ ಕುಟುಂಬ, ಮದುವೆ, ಸಂಪ್ರದಾಯ, ನಂಬಿಕೆಗಳು ಧರ್ಮ, ಇವೆಲ್ಲವೂ ಮಹಿಳೆಯರನ್ನು ಆಳುತ್ತಲೇ ಬರುತ್ತಿರುವುದರಿಂದ, ಅವಳು ತನ್ನ ಅಸ್ತಿತ್ವದ ಹುಡುತಕಾಟದಲ್ಲಿ ವಿಫಲಳಾಗುತ್ತಿದ್ದಾಳೆ. ಪುರುಷ ಪ್ರಧಾನ ವ್ಯವಸ್ಥೆಯ ಚೌಕಟ್ಟಿನಲ್ಲಿರುವ ಮಹಿಳೆಗೆ, ವ್ಯವಸ್ಥೆಯ ಕಬಂಧ ಬಾಹುಗಳಲ್ಲಿ ಬಂಧಿಸಿರುವುದರಿಂದ, ಅವಳು ಈ ಕಬಂಧ ಬಾಹುಗಳಿಂದ ಸ್ವತಂತ್ರಳಾಗಿ, ವಿಮುಕ್ತಿ ಪಡೆಯಲು, ತನ್ನದೇ ಆದ ಅಸ್ತಿತ್ವವನ್ನು ಹುಡುಕಾಡುವ ಪ್ರಯತ್ನಗಳು ಅನೇಕ. ಸ್ತ್ರೀವಾದಿಗಳು ಮಾಡಿದ್ದಾರೆ. ಹೆಣ್ಣಿನ ಅಸ್ತಿತ್ವವನ್ನು ಗುರುತಿಸಿ, ಪುರುಷಪ್ರಧಾನ ವ್ಯವಸ್ಥೆಯು ನಿರ್ಮಿಸಿದಂತಹ ಚೌಕಟ್ಟನ್ನು ಒಡೆದು, ಆ ಚೌಕಟ್ಟಿನ ಪುನರನಿರ್ಮಾಣದ ಕಾರ್ಯ ಅನೇಕ ಸ್ತ್ರೀವಾದಿಗಳು ಮಾಡಿದ್ದಾರೆ.

ಕೆಳವರ್ಗದ, ಅಂಚಿನಲ್ಲಿರುವ ಸಮುದಾಯಗಳ, ಕೊಳಚೆ ಪ್ರದೇಶಗಳ ಮಹಿಳೆಯರ ಕುರಿತು ಸ್ತ್ರೀವಾದಿಗಳು ಪ್ರಮುಖವಾದ ವಿಷಯಗಳ ಮೇಲೆ ಬೆಳಕು ಚೆಲ್ಲಿದ್ದಾರೆ. ಈ ಕೆಳವರ್ಗದ ಮಹಿಳೆಯರಿಗೂ ಸಮಾಜದ ಪ್ರಧಾನಧಾರೆಗೆ ಬರುವಂತೆ, ಅವರು ಸಹ ಸಬಲೀಕರಣ ಹೊಂದಬೇಕೆಂದು, ಅನೇಕ ಸ್ತ್ರೀವಾದಿಗಳು ಹೋರಾಟ ನಡೆಸಿದ್ದಾರೆ. ಸಮಾಜದಲ್ಲಿ ಉಳ್ಳವರು ಮತ್ತು ಇಲ್ಲದವರ ಮಧ್ಯೆ ಇರುವ ತಾರತಮ್ಯವನ್ನು ಹೋಗಲಾಡಿಸಿ, ಕುಟುಂಬದಲ್ಲಿರುವ ಲಿಂಗ ತಾರತಮ್ಯವನ್ನು ಕೂಡ ಸಂಪೂರ್ಣವಾಗಿ ಹೋಗಲಾಡಿಸುವ ಪ್ರಯತ್ನಗಳು ಅನೇಕ ಸ್ತ್ರೀವಾದಿಗಳು ಮಾಡಿದ್ದಾರೆ.

ಕೆಳವರ್ಗದ ಮಹಿಳೆಯರೇ ಹೆಚ್ಚಾಗಿ ವಾಸಿಸುವ ಕೊಳಚೆ ಪ್ರದೇಶಗಳಲ್ಲಿ ಮಹಿಳೆಯರ ಬದುಕು ತೀರಾ ಕಷ್ಟಕರವಾಗಿದ್ದು. ಸದಾ ಒಂದಿಲ್ಲೊಂದು ಸಮಸ್ಯೆಗಳ ಸುಳಿಯಲ್ಲಿ ಸಿಲುಕಿಕೊಂಡಿರುವ ಜೀವನ ನಡೆಸುತ್ತಿರುತ್ತಾರೆ. ಈ ಕೊಳಚೆ ಪ್ರದೇಶಗಳು ಪಟ್ಟಣಗಳು ಬೆಳೆದಂತೆಲ್ಲಾ ಬೆಳೆಯುತ್ತಾ ಹೋಗುತ್ತಿವೆ. ಹೆಚ್ಚು, ಹೆಚ್ಚು ಪಟ್ಟಣಗಳು. ಹೆಚ್ಚು ಹೆಚ್ಚು ಕೊಳಚೆ ಪ್ರದೇಶಗಳ ಸೃಷ್ಟಿಗೆ ಕಾರಣವಾಗುತ್ತಿವೆ. ನಗರಗಳಲ್ಲಿಯೇ ಬಡಾವಣೆಗಳು ಶ್ರೇಷ್ಠ. ಕೊಳಚೆ ಪ್ರದೇಶಗಳು ಕನಿಷ್ಠ ಎಂಬ ಶ್ರೇಣೀಕರಣವನ್ನು ಮಾಡಲಾಗುತ್ತಿದೆ. ಈ ಶ್ರೇಣೀಕರಣದ ಕಂದಕಗಳು ಬೃಹದಾಕಾರವಾಗಿ ಬೆಳೆಯುತ್ತಿವೆ. ಅಧಿಕಾರವು ಬಂಡವಾಳ ಶಾಹಿಗಳ ಕೈಯಲ್ಲಿರುವುದರಿಂದ, ಬಂಡವಾಳಶಾಹಿಗಳು ಮೇಲ್ವರ್ಗದ ಜನರಿಗೆ ಪೂರಕವಾಗಿದ್ದು. ಕೆಳವರ್ಗದವರನ್ನು ಅಂಚಿನ ಸಮುದಾಯದವರನ್ನು ತೀರ ಅಂಚಿಗೆ ತಳ್ಳಲಾಗುತ್ತಿದೆ. ಪ್ರಜಾಪ್ರಭುತ್ವದಲ್ಲಿ ಎಲ್ಲರಿಗೂ ಸಮಾನವಾಗಿ ಕಾಣಬೇಕಾದದ್ದು ಕರ್ತವ್ಯ. ಆದರೆ ಈ ಸಮಾನತೆ ಕೆಳವರ್ಗದ ಜನರ ಕಡೆಗೆ ನಿರ್ಲಕ್ಷ್ಯ ವಹಿಸಿದೆ. ಇಂಥಹ ಸಂದರ್ಭದಲ್ಲಿ ಕೊಳಚೆ ಪ್ರದೇಶಗಳ ಜನರ ಬದುಕು ತೀರಾ ಅಭದ್ರತೆಗೆ, ಅಧೀನಕ್ಕೆ ಒಳಗಾಗುತ್ತಿದೆ. ಉಳ್ಳವರು ಮನೆಗಳ ಮುಂದೆ ಸುಸಜ್ಜಿತವಾದ ರಸ್ತೆಗಳಿರುತ್ತವೆ. ಆದರೆ ಕೊಳಚೆ ಪ್ರದೇಶಗಳಲ್ಲಿ ರಸ್ತೆಗಳನ್ನು ಕಾಣುವುದಿಲ್ಲ. ಇದು ನಗರಗಳಲ್ಲಿಯೇ ಇರುವ ಅಸಮಾನತೆಯನ್ನು ಎತ್ತಿ ತೋರಿಸುತ್ತದೆ. ಪ್ರಭುತ್ವವು ಅಧಿಕಾರಿಗಳಿಗೆ, ಮೇಲ್ವರ್ಗದ ಜನರಿಗೆ ಮಾತ್ರ ಸೀಮಿತವಾಗಿದೆ. ಉಳಿದಂತೆ ಕೆಳವರ್ಗದ, ಅಂಚಿನ ಸಮುದಾಯದವರ ಪಾಲಿಗೆ ಅದು ಕನಸಿನ ಮಾತಾಗಿದೆ.

ಮೂಲಭೂತ ಅವಶ್ಯಕತೆಗಳಿಂದ ವಂಚಿತವಾಗಿರುವಂತಹ ಈ ಕೊಳಚೆ ಪ್ರದೇಶಗಳ ಜನರು ದಿನನಿತ್ಯ ಒಂದಿಲ್ಲೊಂದು ಸಮಸ್ಯೆಗಳನ್ನು ಎದುರಿಸುತ್ತಲೇ ಬರುತ್ತಿದ್ದಾರೆ. ಅದರಲ್ಲಿ ಮಹಿಳೆಯರು ಅದರ ತೀವ್ರತೆಯನ್ನು ಅನುಭವಿಸುತ್ತಿದ್ದಾರೆ. ಯಾವುದೇ ಸಮಸ್ಯೆ ಅದು ಆರ್ಥಿಕವಾದ, ಸಾಮಾಜಿಕವಾದ, ಶೈಕ್ಷಣಿಕವಾದ ಯಾವುದೇ ಸಮಸ್ಯೆಯಾದರೂ ಅದರ ಆಕ್ರಮಣತೆಯನ್ನು ಮೊದಲಿಗೆ ಎದುರಿಸುವವಳು ಈ ಪ್ರದೇಶಗಳ ಮಹಿಳೆಯರು. ಪ್ರಸ್ತುತ ಅಧ್ಯಯನವು "ಗುಲಬರ್ಗಾ ಕೊಳಚೆ ಪ್ರದೇಶದ ಮಹಿಳಾ ಬದುಕು" ಶೀರ್ಷಿಕೆಯನ್ನು ಹೊಂದಿದ್ದು, ಈ ಸಂಪ್ರಬಂಧವು ಮಹಿಳೆಯರ ಬದುಕಿನ ಚಿತ್ರಣದ ಅವಶ್ಯಕತೆಗಾಗಿ ಬೇರೆ ಬೇರೆ ವಲಯಗಳಾಗಿ ಅಂದರೆ, ಆರ್ಥಿಕವಾದ, ಸಾಮಾಜಿಕವಾದ,

ಆರೋಗ್ಯೀಕೃತವಾದ ಮತ್ತು ಶೈಕ್ಷಣಿಕವಾದ ವಲಯಗಳಲ್ಲಿ ವಿಂಗಡಿಸಿಕೊಂಡು ಅಧ್ಯಯನ ಕೈಗೊಳ್ಳಲಾಗಿದೆ. ಈ ಶೀರ್ಷಿಕೆಯ ಅಡಿಯಲ್ಲಿ ಐದು ಅಧ್ಯಾಯಗಳನ್ನು ಅಧ್ಯಯನಕ್ಕಾಗಿ ಹಾಕಿಕೊಳ್ಳಲಾಗಿದೆ.

ಪರಿವಿಡಿಯ ಮೊದಲನೆಯ ಅಧ್ಯಾಯದಲ್ಲಿ ಅಧ್ಯಾಯ ಒಂದು ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವೈಧಾನಿಕತೆಯನ್ನು ಅಧ್ಯಯನ ಮಾಡಲಾಗಿದೆ. ಈ ಅಧ್ಯಯನದ ಪ್ರಮುಖವಾದ ಉದ್ದೇಶ ಸಮಾಜದಲ್ಲಿರುವ ಲಿಂಗ ತಾರತಮ್ಯವನ್ನು, ಲಿಂಗಾಧಾರಿತ ಶ್ರಮವಿಭಜನೆ, ಆರ್ಥಿಕವಲಯದಲ್ಲಿ ಅಸಮಾನತೆ, ಅಧಿಕ ಶ್ರಮ ಕಡಿಮೆ ಕೂಲಿ, ಕುಟುಂಬದಲ್ಲಿರುವಂತಹ ತಾರತಮ್ಯಗಳನ್ನು ಅರ್ಥೈಸಿಕೊಂಡು, ಮಹಿಳೆಯರ ಅಧೀನ ಬದುಕಿಗೆ ಕಾರಣವಾಗಿರುವ ಅಂಶಗಳನ್ನು ಗುರುತಿಸಿಕೊಂಡು ಸೂಕ್ತವಾದ ಪರಿಹಾರಗಳನ್ನು ಕಂಡುಕೊಳ್ಳುವುದು ಅಧ್ಯಯನದ ಉದ್ದೇಶವಾಗಿದೆ.

ಅಧ್ಯಯನದ ವ್ಯಾಪ್ತಿಯಾಗಿ ಗುಲಬರ್ಗಾ ನಗರವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಮತ್ತು ಗುಲಬರ್ಗಾ ನಗರದಲ್ಲಿ ಬರುವ ಕೊಳಚೆ ಪ್ರದೇಶಗಳನ್ನೆಲ್ಲ ಅಧ್ಯಯನ ಮಾಡಿ ನಿರ್ದಿಷ್ಟವಾಗಿ ಗೊತ್ತುಪಡಿಸಿಕೊಂಡಂತ ಐದು ಕೊಳಚೆ ಪ್ರದೇಶಗಳ ಬಗ್ಗೆ ಸೂಕ್ಷ್ಮವಾದ ಅಧ್ಯಯನವನ್ನು ಕೈಗೊಳ್ಳಲಾಗಿತ್ತು.

ಈ ಅಧ್ಯಯನದಲ್ಲಿ ಸ್ತ್ರೀವಾದಿ ವೈಧಾನಿಕತೆಯನ್ನು, ಮಹಿಳಾ ಅಧ್ಯಯನದ ವೈಧಾನಿಕತೆಯನ್ನು ಅಳವಡಿಸಿಕೊಳ್ಳಲಾಗಿತ್ತು. ಈ ಕೊಳಚೆ ಪ್ರದೇಶಗಳಲ್ಲಿ ಬರುವ ಮಹಿಳೆಯರ ಬದುಕಿನ ಕುರಿತು ಚಿತ್ರಣವನ್ನು ಪ್ರಸ್ತಾವನೆಯಲ್ಲಿ ತಿಳಿಸಲಾಗಿತ್ತು.

ಅಧ್ಯಾಯ ಎರಡರಲ್ಲಿ ಕೊಳಚೆ ಪ್ರದೇಶಗಳ ಅರ್ಥ ಮತ್ತು ನಿರ್ವಚನವನ್ನು ಹೇಳಲಾಗಿದೆ. ಮತ್ತು ಕರ್ನಾಟಕ ಕೊಳಚೆ ಪ್ರದೇಶ ನಿರ್ಮೂಲನ ಮಂಡಳಿ ಮತ್ತು ಅದರ ಕಾರ್ಯ ಸ್ವರೂಪದ ಬಗ್ಗೆ ವಿವರವಾದ ಮಾಹಿತಿಯನ್ನು ನೀಡಲಾಗಿದೆ. ಗುಲಬರ್ಗಾ ನಗರದಲ್ಲಿ ಘೋಷಣೆ ಮಾಡಿರುವಂತಹ ಕೊಳಚೆ ಪ್ರದೇಶಗಳ ವಿವರಣೆಯನ್ನು ನೀಡಲಾಗಿದೆ. ಅದೇ ರೀತಿಯಾಗಿ ಕೊನೆಯದರಲ್ಲಿ ಈ ಪ್ರದೇಶದಲ್ಲಿ ಮಹಿಳೆಯರ ಬದುಕಿನ ಚಿತ್ರಣಕ್ಕೆ ಸ್ತ್ರೀವಾದಿಯ ವ್ಯಾಖ್ಯಾನ ನೀಡಲಾಗಿದೆ. ಮಹಿಳೆಯರ ಅಸ್ತಿತ್ವಕ್ಕೆ ಅವರ ಸಬಲೀಕರಣ. ಶಿಕ್ಷಣಕ್ಕೆ ಹೆಚ್ಚಿನ ಒಲವು ತೋರಿಸಿದ ಸ್ತ್ರೀವಾದಿಗಳ ಸಿದ್ಧಾಂತಗಳನ್ನು ಈ ಉಪಶೀರ್ಷಿಕೆಯಲ್ಲಿ ವಿವರಿಸಲಾಗಿದೆ.

ಅಧ್ಯಾಯ ಮೂರಕ್ಕೆ ಕೊಳಚೆ ಪ್ರದೇಶದ ಮಹಿಳಾ ಬದುಕಿನ ಸಾಮಾಜಿಕ ಸ್ಥಿತಿಗತಿಗಳು. ಎಂಬ ಶೀರ್ಷಿಕೆಯಿದೆ. ಈ ಶೀರ್ಷಿಕೆಯಲ್ಲಿ ಆರು ಉಪಶೀರ್ಷಿಕೆಗಳಿದ್ದು ಪ್ರತಿಯೊಂದು ಉಪಶೀರ್ಷಿಕೆಗಳು ಕೊಳಚೆ ಪ್ರದೇಶಗಳಲ್ಲಿನ ಮಹಿಳೆಯರ ಬದುಕಿನ ಸಾಮಾಜಿಕ ಸ್ಥಿತಿಗತಿಯನ್ನು ವಿವರಿಸುತ್ತದೆ. ಮೊದಲನೆಯ ಉಪಶೀರ್ಷಿಕೆಯು ಪೀಠಿಕೆಯಾಗಿದ್ದು ಉಳಿದ ಶೀರ್ಷಿಕೆಗಳ ಸಾರವನ್ನು ತಿಳಿಸುತ್ತದೆ.

ಕೊಳಚೆ ಪ್ರದೇಶಗಳ ಮಹಿಳೆಯರ ಸಾಮಾಜಿಕ ಸ್ಥಿತಿಗತಿಗಳಿಗೆ ಹಿನ್ನಲೆಯಾಗಿ ಕುಟುಂಬ ವ್ಯವಸ್ಥೆ, ಸಾಮಾಜಿಕತೆ, ಸಂಪ್ರದಾಯಗಳು ಮತ್ತು ನಂಬಿಕೆಗಳು, ಹೇಗೆ ಕಾರಣವಾಗಿವೆ. ಅದೇ ರೀತಿಯಾಗಿ ಗೃಹಿಣಿತ್ವವೆನ್ನುವುದು ಮಹಿಳೆಯರ ಬದುಕಿನಲ್ಲಿ ಎಷ್ಟೊಂದು ಪ್ರಮುಖ ಪಾತ್ರವಹಿಸುತ್ತದೆ ಎನ್ನುವುದನ್ನು ಹೊನ್ನಮ್ಮನ ಹದಿಬದೆಯ ಧರ್ಮದಲ್ಲಿ ತಿಳಿಸಿರುವುದರಿಂದ ಈ ಒಂದು ಶೀರ್ಷಿಕೆಗೆ ಹೊನ್ನಮ್ಮನ ಸಂಪ್ರಾದಾಯಿಕ ಗೃಹಿಣಿತ್ವದ ಮಾದರಿಯನ್ನು ಹಿನ್ನಲೆಯಾಗಿಟ್ಟುಕೊಳ್ಳಲಾಗಿತ್ತು. ಕೊಳಚೆ ಪ್ರದೇಶಗಳ ಮಹಿಳೆಯರು ತಮ್ಮ ಕುಟುಂಬದದಲ್ಲಿರುವ ಲಿಂಗತಾರತಮ್ಯ. ಅಸಮಾನತೆಯನ್ನು ಮತ್ತು ಗೃಹಿಣಿತ್ವದ ಪರಿಕಲ್ಪನೆಯಲ್ಲಿ ಮಹಿಳೆಯು ಎಷ್ಟೊಂದು ಬಂಧಿಯಾಗಿದ್ದಾಳೆ. ಅವಳು ಈ ವ್ಯವಸ್ಥೆಯು ರೂಪಿಸಿಕೊಟ್ಟಂತಹ ವ್ಯವಸ್ಥೆಗೆ ತಕ್ಕಂತೆಯೇ ನಡೆಯಬೇಕು ಎಂಬುದನ್ನು ಹೇಳಿರುವುದರಿಂದ ಅದನ್ನು ಪ್ರಶ್ನೆ ಮಾಡುತ್ತಾ ಈ ಪ್ರದೇಶದ ಮಹಿಳಾ ಬದುಕನ್ನು ಇಲ್ಲಿ ವಿವರಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಕೊಳಚೆ ಪ್ರದೇಶದ ಮಹಿಳೆಯರ ಶೈಕ್ಷಣಿಕ, ಆರೋಗ್ಯದ ಮತ್ತು ಆರ್ಥಿಕ ಸ್ಥಿತಿಗತಿಗಳ ಕುರಿತು ವಿವರಣೆ ನೀಡಲಾಗಿದೆ. ಮಹಿಳಾ ದುಡಿಮೆಯ ನಿರ್ವಚನವನ್ನು ವಿವರಣೆ ನೀಡಲಾಗಿದೆ. ಮಹಿಳೆಯರ ದುಡಿಮೆಯ ಕುರಿತಾದ ಸ್ತ್ರೀವಾದಿ ನಿಲುವುಗಳನ್ನು ಕುರಿತು ವಿವರಣೆ ನೀಡಲಾಗಿದೆ. ಅಧ್ಯಾಯ ನಾಲ್ಕರಲ್ಲಿ ಒಟ್ಟು ಒಂಭತ್ತು ಉಪಶೀರ್ಷಿಕೆಗಳನ್ನು ಹಾಕಿಕೊಳ್ಳಲಾಗಿದೆ. ಅಧ್ಯಾಯಗಳ ಉಪಶೀರ್ಷಿಕೆಯಲ್ಲಿ ಮಹಿಳಾ ದುಡಿಮೆಯ ಸ್ವರೂಪ, ದುಡಿಮೆಯ ವಲಯದಲ್ಲಿ ಮಹಿಳೆ ಮತ್ತು ಪುರುಷರ ಮಧ್ಯೆ ಇರುವ ಶ್ರಮವಿಭಜನೆಯನ್ನು, ಅದಕ್ಕಿರುವ ಕಾರಣಗಳನ್ನು ವಿವರಿಸಲಾಗಿದೆ. ಅಸಂಘಟಿತವಲಯ ಮತ್ತು ಕೊಳಚೆ ಪ್ರದೇಶಗಳ ಮಹಿಳಾ ದುಡಿಮೆಯನ್ನು ಇನ್ನೊಂದು ಉಪಶೀರ್ಷಿಕೆಯಲ್ಲಿ ಶೈಕ್ಷಣಿಕ, ಆರೋಗ್ಯಕ, ಮತ್ತು ಆರ್ಥಿಕ ಪರಿಣಾಗಳನ್ನು, ವಿವರವಾಗಿ ವಿಸ್ತರಿಸಲಾಗಿದೆ. ಕೊಳಚೆ ಪ್ರದೇಶಗಳ ಮಹಿಳೆಯರ ಬದುಕಿನ ದುಡಿಮೆಯನ್ನು ಕುರಿತು ಈ ಅಧ್ಯಯನದಲ್ಲಿ ವಿವರಣೆ ನೀಡಲಾಗಿದೆ.

ಅಧ್ಯಾಯ ಐದು ಸಮಾರೋಪವಿದ್ದು, ಕೊಳಚೆ ಪ್ರದೇಶಗಳಲ್ಲಿ ಅಧ್ಯಯನ ಕೈಗೊಂಡು, ಒಂದು ನಿರ್ದಿಷ್ಟವಾದ ಪ್ರಶ್ನಾವಳಿಯನ್ನು ರಚಿಸಿಕೊಳ್ಳಲಾಗಿತ್ತು. ಈ ಪ್ರಶ್ನಾವಳಿಯನ್ನು ತೆಗೆದುಕೊಂಡು, ಕ್ಷೇತ್ರಕಾರ್ಯವನ್ನು ಮಾಡಿದಾಗ ಅಲ್ಲಿ ಪಡೆದಂತಹ ಮಾಹಿತಿಯನ್ನು ಅಧ್ಯಯನಗಳ ಫಲಿತಗಳಲ್ಲಿ ವಿವರಣೆ ನೀಡಲಾಗಿದೆ, ಕೊಳಚೆ ಪ್ರದೇಶಗಳ ಅಭಿವೃದ್ಧಿಗಾಗಿ ಅವಶ್ಯಕವಾಗಿರುವಂತಹ ಕೆಲವು ಸಲಹೆಗಳನ್ನು ಕೂಡ ನೀಡಲಾಗಿದೆ.

ಕೊನೆಯದಾಗಿ ಅನುಬಂಧಗಳಲ್ಲಿ ಪ್ರಶ್ನಾವಳಿ, ಪ್ರಮುಖ ವಕ್ತೃಗಳ ವಿವರ, ಕೋಷ್ಟಕಗಳು, ಗ್ರಂಥಋಣ ಹಾಗೂ ಛಾಯಾಚಿತ್ರಗಳನ್ನು ಒದಗಿಸಲಾಗಿದೆ.

## ೫.೨ ಅಧ್ಯಯನದ ಫಲಿತಗಳು

ಕ್ಷೇತ್ರಕಾರ್ಯಕ್ಕೆಂದು ಆಯ್ದುಕೊಂಡಿರುವ ಐದು ಕೊಳಚೆ ಪ್ರದೇಶಗಳ ಮಹಿಳೆಯರೊಂದಿಗೆ ಸಂದರ್ಶನ ಮಾಡುವಾಗ ನಿರ್ದಿಷ್ಟ ಪ್ರಶ್ನಾವಳಿಯನ್ನು ರೂಪಿಸಿಕೊಳ್ಳಲಾಗಿತ್ತು. ಈ ಪ್ರಶ್ನಾವಳಿಯಿಂದ ಪಡೆದಂತಹ ಮಾಹಿತಿಯನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಮತ್ತು ಈ ಸಂದರ್ಶನದಿಂದ ತಿಳಿದು ಬಂದಂತಹ ಪ್ರಮುಖವಾದ ಅಂಶಗಳನ್ನು ಅಧ್ಯಯನದ ಫಲಿತಗಳಲ್ಲಿ ದಾಖಲಿಸಲಾಗಿದೆ.

* ಆರ್ಥಿಕವಾಗಿ, ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದಿರುವಂತಹ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಅಲ್ಪ ಸಂಖ್ಯಾತರಾದ ಮುಸ್ಲಿಮರು ವಾಸಿಸುವವರಾಗಿದ್ದಾರೆ. ಕೂಲಿ, ಗಾರೆ ಕೆಲಸ, ಇಟ್ಟಂಗಿ ಭಟ್ಟಿಯಲ್ಲಿ ದುಡಿಯುವವರು ಕುಲಕಸುಬಾದ ಚಾಪೆ ಮಾರುವವರು ಹೀಗೆ ಇನ್ನೂ ಅನೇಕ ಕೆಲಸಗಳಲ್ಲಿ ಭಾಗಿಯಾಗಿರುವವರು ಈ ಪ್ರದೇಶಗಳಲ್ಲಿದ್ದಾರೆ.
* ಈ ಪ್ರದೇಶಗಳು ಸಾಮಾಜಿಕತೆಯಿಂದ ಪ್ರತ್ಯೇಕವಾಗಿರುವುದರಿಂದ ಇಲ್ಲಿ ನೈತಿಕತೆಯು, ಶಿಷ್ಟಾಚಾರವು ಇರುವುದಿಲ್ಲ.
* ಮೂಢನಂಬಿಕೆಗಳು ಹಾಸು ಹೊಕ್ಕಾಗಿವೆ. ತಮ್ಮ ಮಕ್ಕಳಿಗಾಗಲಿ, ತಮಗಾಗಲಿ ಕಾಯಿಲೆ ಬಂದರೂ ಮನೆದೇವರ ಹೆಸರಿನಲ್ಲಿ 'ಭಂಡಾರ' ಹಚ್ಚುವ ರೂಢಿ ಇವರಿಗಿದೆ. ಹೀಗೆ ಭಂಡಾರ ಹಚ್ಚುವುದರಿಂದ ದೇವಿ ಪ್ರಸನ್ನಳಾಗಿ ರೋಗವನ್ನು ಗುಣವಾಗುವಂತೆ ಮಾಡುತ್ತಾಳೆಂಬ ನಂಬಿಕೆ ಇವರಲ್ಲಿ ಬೇರೂರಿದೆ.
* ವಾಸಿಸಲು ಯೋಗ್ಯವಲ್ಲದ ಮನೆ ಮತ್ತು ಚರಂಡಿ ವ್ಯವಸ್ಥೆ, ಕಲುಷಿತವಾದ ವಾತಾವರಣ, ಅನೇಕ ವಿಷಕಾರಿಯಾದ ಕ್ರಿಮಿಕೀಟಗಳಿಂದ ಮಲೇರಿಯಾ, ಕಾಲರಾ, ಟೈಫಾಯಿಡ್‌ದಂತಹ ರೋಗಗಳಿಗೆ ತುತ್ತಾಗುತ್ತಾರೆ. ರೋಗಗಳಿಗೆ ಪದೇ ಪದೇ ತುತ್ತಾಗುವವರು ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆ ಮತ್ತು ಮಕ್ಕಳೇ ಆಗಿದ್ದಾರೆ.
* ಮಹಿಳೆ ಮತ್ತು ಪುರುಷ ಕಾರ್ಮಿಕರು ದಿನಕ್ಕೆ ೮-೧೨ ಗಂಟೆಗಿಂತಲೂ ಮೀರಿ ದುಡಿಯುತ್ತಾರೆ. ಹಾಗೆ ದುಡಿಯುವ ಕಾರ್ಮಿಕರ ಕೂಲಿಯಲ್ಲಿ ತಾರತಮ್ಯವಿರುವುದು ಕಂಡುಬಂದಿತು. ಪುರುಷರು ೪೦-೧೨೦ ರೂ.ಗಳಂತೆ ಸ್ತ್ರೀಯರು ೨೦-೨೫ ರೂ.ಗಳಂತೆ ಒಂದು ದಿನಕ್ಕೆ ಕೂಲಿಯನ್ನು ತೆಗೆದು ಕೊಳ್ಳುತ್ತಾರೆ. ಮಹಿಳೆಯರಿಗೆ "ಅಧಿಕ ಶ್ರಮ ಕಡಿಮೆ ಕೂಲಿ" ದೊರೆಯುವುದು ತಿಳಿದು ಬಂದಿದೆ.
* ಮಹಿಳಾ ದುಡಿಮೆಗಾರರು ಬಿಸಿಲು, ಮಳೆ, ಚಳಿ ಎನ್ನದೇ ದುಡಿಯುವುದರಿಂದ ಅನೇಕ ಆರೋಗ್ಯದ ಸಮಸ್ಯೆಗಳನ್ನು ಎದುರಿಸುತ್ತಾರೆ. ತಮ್ಮ ಆರೋಗ್ಯದ ಕಡೆಗೆ ದಿವ್ಯವಾದ ನಿರ್ಲಕ್ಷ್ಯ ವನ್ನು ತೋರುತ್ತಾರೆ.

* ಈ ಪ್ರದೇಶದ ಪುರುಷರು ತಮಗೆ ದೊರೆತ ಕೂಲಿಯಿಂದ ಹೆಚ್ಚಿನ ಲಾಭಬರುವುದಿಲ್ಲವಾದ್ದರಿಂದ ಕೆಲಸವನ್ನು ಹುಡುಕುತ್ತಾ ಹೆಚ್ಚಿನ ಹಣವನ್ನು ಸಂಪಾದಿಸುವ ಉದ್ದೇಶದಿಂದ ತಾತ್ಕಾಲಿಕವಾಗಿ ಮುಂಬಯಿ, ಪುಣೆ, ಬೆಂಗಳೂರುಗಳಂತಹ ನಗರಗಳಿಗೆ ವಲಸೆ ಹೋಗುವವರು ಇದ್ದಾರೆ.

* ಈ ಪ್ರದೇಶಗಳಲ್ಲಿ ಶೈಕ್ಷಣಿಕ ಮಟ್ಟವು ಕಡಿಮೆ ಇದ್ದು, ಕೆಲವೊಂದು ಪ್ರದೇಶಗಳಲ್ಲಿ ಕೇವಲ ಪ್ರಾಥಮಿಕ ಶಾಲೆಗಳಿದ್ದು, ಮುಂದಿನ ಶಿಕ್ಷಣಕ್ಕಾಗಿ ನಗರಕ್ಕೆ ಹೋಗಬೇಕಾಗುತ್ತದೆ. ನಗರದಲ್ಲಿ ಶಿಕ್ಷಣದ ಎಲ್ಲಾ ವ್ಯವಸ್ಥೆ ಇದ್ದರೂ ಕೂಡ ಹೆಚ್ಚಿನ ವಿದ್ಯಾರ್ಥಿಗಳು ಶಾಲೆಯನ್ನು ಅರ್ಧಕ್ಕೆ ನಿಲ್ಲಿಸಿದವರಿದ್ದಾರೆ.

* ಈ ಪ್ರದೇಶಗಳಲ್ಲಿ ಮಹಿಳೆಯರಿಗೆ ವಿದ್ಯಾಭ್ಯಾಸವನ್ನು ಕೊಡಿಸುವುದೇ ಅಪರೂಪ. ವಿದ್ಯಾಭ್ಯಾಸವನ್ನು ಕೊಡಿಸಿದರು ಅದನ್ನು ಮುಂದುವರೆಸಿಕೊಂಡು ಹೋಗುವುದು ಕಷ್ಟವಾಗಿದೆ. ಕೊಳಚೆ ಪ್ರದೇಶವಾದ ಬುದ್ಧನಗರದಲ್ಲಿ ಪದವಿಯನ್ನು ಪಡೆದುಕೊಂಡಂತಹ ಮಹಿಳೆಯರಿದ್ದಾರೆ. ಉಳಿದಂತಹ ಪ್ರದೇಶಗಳ ಮಹಿಳೆಯರು ಅನಕ್ಷರಸ್ಥರೇ ಆಗಿದ್ದಾರೆ.

* ಆರ್ಥಿಕ ಸ್ವಾವಲಂಬನೆ, ಹಣಕಾಸು ವ್ಯವಹಾರದಲ್ಲಿನ ಜ್ಞಾನ ಇವರಿಗೆ ಕಡಿಮೆ. ಬಡತನವೇ ಹಾಸು ಹೊಕ್ಕಾಗಿರುವಾಗ ಉನ್ನತ ವಿದ್ಯಾಭ್ಯಾಸ ಕೊಡಿಸುವುದು ಕಷ್ಟವಾಗಿ ಓದುವ ಮನಸ್ಸಿದ್ದರೂ ಹಣಕಾಸಿನ ತೊಂದರೆಯಿಂದ ಅರ್ಧದಲ್ಲಿಯೇ ಶಾಲೆಬಿಟ್ಟ ಮಹಿಳೆಯರ ಉದಾಹರಣೆಯೂ ಸಿಗುತ್ತದೆ.

* ಆಯ್ದುಕೊಂಡಿರುವ ಪ್ರದೇಶಗಳಲ್ಲಿ ಪುರುಷರು ರಾಜಕೀಯ ಚಟುವಟಿಕೆಗಳಲ್ಲಿ ಹೆಚ್ಚಿನ ಒಲವನ್ನು ತೋರಿಸುವುದರಿಂದ ಚುನಾವಣಾ ಪ್ರಚಾರದಲ್ಲಿ, ಮತದಾನದ ಸಂದರ್ಭದಲ್ಲಿ, ಹೆಚ್ಚಿನ ಓಡಾಟವನ್ನು ನಡೆಸುತ್ತಾರೆ. ಧರಣಿಗಳು, ಸತ್ಯಾಗ್ರಹಗಳು, ಬಂದ್‌ಗಳಲ್ಲಿ ಹೆಚ್ಚಿನ ಓಡಾಟವಿಟ್ಟು ಕೊಂಡಿರುವವರಿದ್ದು ತಮ್ಮ ತಮ್ಮಲ್ಲಿಯೇ ಪಕ್ಷಗಳನ್ನು ಕಟ್ಟಿಕೊಂಡು ಅಥವಾ ಬೇರೆ ಬೇರೆ ಪಕ್ಷಗಳಿಗೆ ಸದಸ್ಯರಾಗಿರುವುದರಿಂದ ಇಲ್ಲಿ ಒಳಜಗಳಗಳು ಸಾಮಾನ್ಯವಾಗಿವೆ, ಮತ್ತು ಇವೇ ಆಂತರಿಕ ಕಲಹಗಳು ಮುಂದೆ ದೊಡ್ಡ ಕಲಹಗಳಿಗೆ ದಾರಿ ಮಾಡಿಕೊಡುವುದು ಕಂಡುಬಂದಿದೆ.

* ಅಧ್ಯಯನಕ್ಕೆ ಒಳಪಟ್ಟ ಪ್ರದೇಶಗಳ ಸಮೀಪದಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರಗಳು ಇಲ್ಲ. ಆರೋಗ್ಯವು ಹದಗೆಟ್ಟಾಗ ನಗರದ ಆಸ್ಪತ್ರೆಗೆ ಹೋಗಬೇಕಾಗುತ್ತದೆ. ನಗರದಲ್ಲಿರುವ ವೈದ್ಯರ ಇಂಜೆಕ್ಷನ್ನಿಗಿಂತಲೂ ಮಂತ್ರವಾದಿಯ 'ತಾಯತ' ಲೇಸು ಎಂದು ಆಸ್ಪತ್ರೆಗೆ ಹೋಗುವುದಿಲ್ಲ. ಹೀಗೆ ಹೋಗದೇ ಇರುವುದಕ್ಕೆ ಬಡತನವೂ ಕೂಡ ಒಂದು ಪ್ರಮುಖ ಕಾರಣವಾಗಿದೆ.

* ಈ ಪ್ರದೇಶದ ಜನರು ವರ್ಷದಲ್ಲಿ ಕೆಲವು ತಿಂಗಳುಗಳವರೆಗೆ ಮಾತ್ರ ದುಡಿಯುತ್ತಾರೆ. ಉಳಿದ ದಿನಗಳಲ್ಲಿ ಯಾವುದೇ ಕೆಲಸವಿಲ್ಲದೇ ಕುಳಿತಿರುತ್ತಾರೆ. ಈ ಸಂದರ್ಭದಲ್ಲಿ ಬೇರೆ ಯಾವುದಾದರೂ

ಉದ್ಯೋಗ ಮಾಡಬೇಕೆಂದರೆ ಅವರಲ್ಲಿ ಬಂಡವಾಳ ಮತ್ತು ಸ್ವಯಂ ಉದ್ಯೋಗ ಕೈಗೊಳ್ಳಲು ತರಬೇತಿಯ ಕೊರತೆ ಇರುವುದು.

* ಕೆಳಜಾತಿಯವರೇ ವಾಸಿಸುವ ಈ ಪ್ರದೇಶಗಳಲ್ಲಿ ಸಾಮಾಜಿಕ ವ್ಯವಸ್ಥೆಯಲ್ಲಿ ಇವರ ಸ್ಥಾನಮಾನ ಕೆಳಮಟ್ಟದ್ದಾಗಿದೆ. ಇವರನ್ನು ಇಂದಿಗೂ ಕೂಡ ಅಸ್ಪೃಶ್ಯರಂತೆಯೇ ಕಾಣಲಾಗುತ್ತದೆ. ಸನಾತನ ಕಾಲದಿಂದಲೂ ನಡೆದು ಬಂದಿರುವಂತಹ ಅಸ್ಪೃಶ್ಯತೆಯಿಂದ ಇಂದಿಗೂ ಕೂಡ ತಲ್ಲಣಗೊಳ್ಳುತ್ತಿದ್ದಾರೆ. ಮೇಲ್ಜಾತಿಯವರ ಮನೆಯ ಸ್ವಚ್ಛತೆಯ ಕೆಲಸವೆಲ್ಲಾ ಇವರದೇ ಆದರೂ, ಮನೆಯ ಒಳಗಡೆ ಇವರಿಗೆ ಪ್ರವೇಶ ನಿಷೇಧವಿರುವುದು ಸಂದರ್ಶನದಿಂದ ತಿಳಿದು ಬಂದಿದೆ.

* ಕೊಳಚೆ ನಿರ್ಮೂಲನಾ ಮಂಡಳಿಯವರು ಹಾಕಿಕೊಂಡಿರುವಂತಹ ವಸತಿ ಯೋಜನೆಯಡಿ, ಈ ಪ್ರದೇಶದ ಜನರಿಗೆ ವಸತಿ ಯೋಜನೆಯಲ್ಲಿ ಮನೆಯನ್ನು ನಿರ್ಮಿಸಿಕೊಡಲಾಗಿದೆ. ಮೊದಲು ಗುಡಿಸಲು, ಹೆಂಚು, ತಗಡುಗಳಿಂದ ನಿರ್ಮಿಸಿಕೊಂಡಿರುವ ಗುಡಿಸಲುಗಳಲ್ಲಿ ವಾಸಿಸುತ್ತಿದ್ದರು. ಇಂದಿಗೂ ಕೂಡ ಕೆಲವರು ಗುಡಿಸಲುಗಳಲ್ಲಿಯೇ ವಾಸಿಸುವುದು ಕಂಡುಬರುತ್ತದೆ.

* ಇಟ್ಟಂಗಿ ಭಟ್ಟಿಯಲ್ಲಿ ಮಹಿಳೆಯರೊಂದಿಗೆ ದುಡಿಯುವ ಪುರುಷರಲ್ಲಿ ಕೆಲವರು ಉನ್ನತ ವ್ಯಾಸಂಗವನ್ನು ಮಾಡಿದವರಿದ್ದಾರೆ. ಹೊಟ್ಟೆಯನ್ನು ತುಂಬಿಸಿಕೊಳ್ಳುವ ಸಲುವಾಗಿ ಭಟ್ಟಿಯಲ್ಲಿ ಕೆಲಸ ಮಾಡುತ್ತಿದ್ದಾರೆ.

* ಈ ಪ್ರದೇಶದಲ್ಲಿರುವ ಮಹಿಳೆ ಮತ್ತು ಪುರುಷರು ಸಮಾನವಾಗಿ ಸಮಸ್ಯೆಯನ್ನು ಎದುರಿಸುತ್ತಾರೆ. ಆದರೆ ಈ ಎಲ್ಲ ಸಮಸ್ಯೆಗಳಿಂದ ನೇರವಾದ ಪರಿಣಾಮ ಮಾತ್ರ ಮಹಿಳೆಯರ ಮೇಲಾಗುತ್ತದೆ. ದುಡಿಮೆಯ ಅಭದ್ರತೆಯು ಕೂಡ ಮಹಿಳೆಯರನ್ನು ತೀರಾ ಜರ್ಝರಿತಳನ್ನಾಗಿ ಮಾಡುತ್ತವೆ.

* ಈ ಪ್ರದೇಶದಲ್ಲಿ ಅನೇಕ ಅಂಧ ಆಚರಣೆಗಳು, ಸಾಮಾಜಿಕ ಪಿಡುಗುಗಳೆಂದು ಹೇಳುವ ದೇವದಾಸಿ ಪದ್ಧತಿಯು, ಆಚರಣೆಯಲ್ಲಿರುವುದು ಮತ್ತು ಬಾಲ್ಯ ವಿವಾಹ ಪದ್ಧತಿಯು ಕೆಲವೊಂದು ಪ್ರದೇಶದಲ್ಲಿ ಇನ್ನೂ ಜೀವಂತವಾಗಿರುವುದು ಕಾಣುತ್ತೇವೆ. ಮದುವೆ ಎಂದರೇನು ಎಂಬ ಅರಿವಿರದ ಕಂದಮ್ಮಗಳ ಕೊರಳಲ್ಲಿ ಮಾಂಗಲ್ಯಸೂತ್ರ ಧರಿಸಿಕೊಂಡು ಆಟವಾಡುತ್ತಿರುವ ಅನೇಕ ಕಂದಮ್ಮಗಳು ಕಣ್ಣಿಗೆ ಬಿದ್ದಿವೆ.

## ೫.೩ ಸಲಹೆಗಳು

ಈ ಕೊಳಚೆ ಪ್ರದೇಶಗಳ ಅಭಿವೃದ್ಧಿಗಾಗಿ ಅನೇಕ ಕಾರ್ಯಕ್ರಮಗಳನ್ನು ರೂಪಿಸುವ ಅಗತ್ಯವಿದೆ. ಕನಿಷ್ಠ ಸೌಲಭ್ಯಗಳಿಂದ ವಂಚಿತವಾಗಿರುವಂತಹ ಪ್ರದೇಶಗಳಾಗಿರುವುದರಿಂದ, ಈ ಪ್ರದೇಶಗಳಿಗೆ ಅವಶ್ಯಕವಾಗಿ ಮಾಡಬಹುದಾದ ಅಭಿವೃದ್ಧಿಗಾಗಿ ಕೆಲವು ಸಲಹೆಗಳನ್ನು ಸೂಚಿಸಲು ಇಚ್ಛಿಸುತ್ತೇನೆ.

* ಸರಕಾರದವರು ಇವರ ಅಭಿವೃದ್ಧಿಗೆ ಸಾಕಷ್ಟು ಮಹತ್ವವನ್ನು ಕೊಡಬೇಕು.

* ಕೊಳಚೆ ಪ್ರದೇಶಗಳು ದೇಶದಲ್ಲಿರುವ ಅನಭಿವೃದ್ಧಿಗೆ ಹಿಡಿದ ಕನ್ನಡಿಯಾಗಿರುವುದರಿಂದ ಅವುಗಳ ನಿರ್ಮೂಲನಕ್ಕಾಗಿ ಸೂಕ್ತ ಕ್ರಮಗಳನ್ನು ತೆಗೆದುಕೊಳ್ಳಬೇಕು.

* ಕೊಳಚೆ ಪ್ರದೇಶದ ನಿರ್ಮೂಲನಕ್ಕಾಗಿಯೇ ಪ್ರತ್ಯೇಕವಾದ ಯೋಜನೆಗಳನ್ನು ಹಾಕಿಕೊಂಡು, ಆ ಯೋಜನೆಗಳು ನೆನೆಗುದಿಗೆ ಬೀಳದಂತೆ ನೋಡಿಕೊಳ್ಳಬೇಕು.

* ಒಳ್ಳೆಯ ರಸ್ತೆ, ಚರಂಡಿ ವ್ಯವಸ್ಥೆ, ವಿದ್ಯುತ್‌ದೀಪ, ಬೀದಿ ದೀಪಗಳು, ಸಾಮೂಹಿಕ ಶೌಚಾಲಯ, ನೀರಿನ ವ್ಯವಸ್ಥೆ, ವಸತಿಯ ವ್ಯವಸ್ಥೆಯನ್ನು ಮಾಡಿಕೊಡಬೇಕು.

* ಬಡತನವೇ ಹಾಸುಹೊಕ್ಕಾಗಿರುವ ಇವರಿಗೆ ಸರಕಾರದವರು ಉದ್ಯೋಗವನ್ನು ಕೊಡುವ ಯೋಜನೆಯನ್ನು ಹಾಕಿಕೊಳ್ಳಬೇಕು, ಈ ಯೋಜನೆಯಡಿ ತೃಪ್ತಿಕರವಾದಂತಹ ಕೂಲಿಯನ್ನು ಕೊಡಬೇಕು, ಅವರ ಬದುಕಿನ ಭದ್ರತೆಗಾಗಿ ಉದ್ಯೋಗವನ್ನು ಕೊಡುವುದು ಅವಶ್ಯಕವಾಗಿದೆ.

* ಇವರು ದುಡಿದು ತಂದ ಕೂಲಿಯಲ್ಲಿ ಮುಂದಿನ ಭವಿಷ್ಯಕ್ಕಾಗಿ ಅಲ್ಪ ಸ್ವಲ್ಪ ಉಳಿತಾಯ ಮಾಡುವುದಕ್ಕೆ ಪ್ರೋತ್ಸಾಹ ಕೊಡಬೇಕು.

* ಹೆಣ್ಣುಮಕ್ಕಳ ಶಿಕ್ಷಣಕ್ಕೆ ಹೆಚ್ಚಿನ ಮಹತ್ವ ಮತ್ತು ಪ್ರೋತ್ಸಾಹವನ್ನು ಕೊಡಬೇಕು.

* ಗುಡಿ ಕೈಗಾರಿಕೆಗಳ ಮಹತ್ವವನ್ನು ತಿಳಿಸಿ ಕೊಡಬೇಕು ಮತ್ತು ಗುಡಿ ಕೈಗಾರಿಕೆಗಳನ್ನು ಅಳವಡಿಸಿ ಕೊಳ್ಳುವಂತೆ ಸೂಕ್ತವಾದ ಮಾಹಿತಿಯನ್ನು ನೀಡುವುದರ ಜೊತೆಗೆ ಸ್ವಯಂ ಉದ್ಯೋಗ ಕೈಗೊಳ್ಳಲು ಬಂಡವಾಳದ ವ್ಯವಸ್ಥೆಯನ್ನು ಒದಗಿಸಬೇಕು.

* ಹೆಣ್ಣುಮಕ್ಕಳು ತಮ್ಮಲ್ಲಿಯೇ ಸ್ವಸಹಾಯ ಗುಂಪುಗಳನ್ನು ಕಟ್ಟಿಕೊಂಡು ತಮ್ಮ ಅಭಿವೃದ್ಧಿಗೆ ಅವರೂ ಕೂಡ ಶ್ರಮಿಸಬೇಕು.

* ಸ್ತ್ರೀ ಪುರುಷರ ದುಡಿಮೆಯನ್ನು ಸಮಾನವಾಗಿ ಕಾಣಬೇಕು, ಸಮಾನ ಕೆಲಸಕ್ಕೆ ಸಮಾನ ವೇತನ ಕೊಡಬೇಕು, ತಾರತಮ್ಯವನ್ನು ದೂರ ಇಡಬೇಕು.

* ಮಾನವ ಅಭಿವೃದ್ಧಿಗೆ ಹೆಚ್ಚಿನ ಪ್ರಾಮುಖ್ಯತೆ ಕೊಡಬೇಕು.

* ಆರೋಗ್ಯದ ಬಗ್ಗೆ ಸೂಕ್ತ ಮಾಹಿತಿ ಕೊಡಬೇಕು.

* ಪ್ರತಿಯೊಂದು ಕೊಳಚೆ ಪ್ರದೇಶಗಳಲ್ಲಿಯೂ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು, ಪ್ರಾಥಮಿಕ ಮತ್ತು ಪ್ರೌಢಶಾಲೆಗಳನ್ನು ಮತ್ತು ಅಂಗನವಾಡಿ ಕೇಂದ್ರಗಳನ್ನು ಸ್ಥಾಪಿಸಬೇಕು.

* ಕುಟುಂಬ ಕಲ್ಯಾಣದ ಬಗ್ಗೆ ಪುರುಷರಿಗೆ ಮತ್ತು ಮಹಿಳೆಯರಿಗೆ ಮಾಹಿತಿ ಕೊಡಬೇಕು.

* ಇತ್ತೀಚಿನ ದಿನಗಳಲ್ಲಿ ಭಯಾನಕವಾದ ರೂಪ ಪಡೆದಿರುವಂತಹ ಎಚ್.ಐ.ವಿ. ಏಡ್ಸ್, ಟಿ.ಬಿ.ಗಳ ಬಗ್ಗೆ, ಈ ರೋಗಗಳಿಂದ ಮುಕ್ತವಾಗಿರುವಂತೆ ಅವರಿಗೆ ಮನವರಿಕೆ ಮಾಡಿಕೊಡುವುದರ ಜೊತೆಗೆ ಇದರ ಪರಿಣಾಮಗಳ ಬಗ್ಗೆ ಮಾಹಿತಿ ಕೊಡಬೇಕು.
* ವ್ಯವಸ್ಥೆಯಲ್ಲಿರುವ ಮಹಿಳಾ ಶೋಷಣೆ, ಲಿಂಗಾಧಾರಿತ ಶ್ರಮವಿಭಜನೆ ಮತ್ತು ತಾರತಮ್ಯವನ್ನು ತಡೆಗಟ್ಟುವಂತೆ ಆಗಬೇಕು.

# ಅನುಬಂಧಗಳು

೧. ಪ್ರಶ್ನಾವಳಿಯ ಮಾದರಿ

೨. ಪ್ರಮುಖ ವಕ್ತೃಗಳ ವಿವರ

೩. ಕೋಷ್ಟಕಗಳು

೪. ಗ್ರಂಥಋಣ

೫. ಛಾಯಾಚಿತ್ರಗಳು

## ೧. ಪ್ರಶ್ನಾವಳಿಯ ಮಾದರಿ

೧. ಹೆಸರು :

೨. ವಯಸ್ಸು :

೩. ಜಾತಿ ಧರ್ಮ :

೪. ಭಾಷೆ :

೫. ಕುಟುಂಬದ ವಿವರ :

೧. ಅವಿಭಕ್ತ ೨. ವಿಭಕ್ತ

೬. ಮಹಿಳೆಯರ ವೈವಾಹಿಕ ಸ್ಥಾನಮಾನ :

೧. ವಿವಾಹಿತ ೨. ಅವಿವಾಹಿತ ೩. ವಿಚ್ಛೇದಿತ ೪. ವಿಧವೆ

೭. ಕುಟುಂಬದ ವಾರ್ಷಿಕ ಆದಾಯ :

೮. ಶಿಕ್ಷಣ

೧. ಅಕ್ಷರಸ್ಥರು ೨. ಅನಕ್ಷರಸ್ಥರು ೩. ಪ್ರಾಥಮಿಕ ಶಿಕ್ಷಣ ೪. ಮಾಧ್ಯಮಿಕ ಶಿಕ್ಷಣ ೫. ಪ್ರೌಢ ಶಿಕ್ಷಣ

೯. ನಿಮ್ಮ ಮಕ್ಕಳು ಶಾಲೆಗೆ ಹೋಗುತ್ತಿರುವರೇ? ಹೌದು/ಇಲ್ಲ

೧೦. ಇಲ್ಲದಿದ್ದರೆ ಏಕೆ ಕಳುಹಿಸಲಿಲ್ಲ?

೧೧. ಹೆಣ್ಣುಮಕ್ಕಳನ್ನು ಗಂಡುಮಕ್ಕಳಂತೆ ಓದಿಸುವಿರಾ? ಹೌದು/ಇಲ್ಲ

೧೨. ಮಕ್ಕಳಿಗಾಗಿ ಸರ್ಕಾರ ಹಾಕಿಕೊಂಡಿರುವ ಸೌಲಭ್ಯಗಳ ಬಗ್ಗೆ ಮಾಹಿತಿ ಇದೆಯಾ? ಹೌದು/ಇಲ್ಲ

೧೩. ಒಟ್ಟಾರೆಯಾಗಿ ಶಿಕ್ಷಣದ ಬಗ್ಗೆ ನಿಮ್ಮ ಅಭಿಪ್ರಾಯವೇನು?

೧೪. ಆರ್ಥಿಕ ಸ್ಥಿತಿ

೧೫. ಯಾವ ಉದ್ಯೋಗದಲ್ಲಿ ತೊಡಗಿಕೊಂಡಿರುವಿರಿ

೧. ಗಾರೆ ಕೆಲಸ ೨. ಕೃಷಿ ೩. ರಸ್ತೆ ನಿರ್ಮಾಣ ೪. ಮನೆಗೆಲಸ ೫. ಇತರೆ

೧೬. ಕೆಲಸದ ಅವಧಿಯ ವಿವರ

೧. ಎಂಟು ತಾಸುಗಳಿಂದ ಕಡಿಮೆ

೨. ಎಂಟು ತಾಸುಗಳಿಗಿಂತ ಹೆಚ್ಚು

೩. ಹತ್ತು ತಾಸುಗಳಿಗಿಂತ ಹೆಚ್ಚು

೧೭. ಕೂಲಿ ಪಡೆಯುವ ಬಗೆ

೧. ಕೂಲಿ ಮಾತ್ರ ೨. ಕೂಲಿ ಜೊತೆ ಊಟ ೩. ದವಸ ಧಾನ್ಯ ಮತ್ತು ಊಟ ೪. ಗುತ್ತಿಗೆ

೧೮. ಒಂದು ದಿನದ ಕೂಲಿಯ ವಿವರ

೧. ೨೫ ರೂಪಾಯಿ ೨. ೩೫ ರೂಪಾಯಿ ೩. ೪೦ ರೂಪಾಯಿ ಅದಕ್ಕಿಂತಲೂ ಹೆಚ್ಚು ೪. ದವಸ ಧಾನ್ಯಗಳನ್ನು ಕೊಡುತ್ತಾರೆ.

೧೯. ವರ್ಷದಲ್ಲಿ ಕೆಲಸವಿರುವ ದಿನಗಳು

೧. ೯೦ ದಿನಗಳು ೨. ೧೮೦ ದಿನಗಳು ೩. ೨೪೦ ದಿನಗಳು ೪. ವರ್ಷ ಪೂರ್ತಿ

೨೦. ಕೂಲಿ ಹಣವನ್ನು ಖರ್ಚು ಮಾಡುವ ಬಗೆ

೧. ಸ್ವಂತಕ್ಕಾಗಿ ೨. ಮನೆಗಾಗಿ ೩. ಸಂಬಂಧಿಗಳಿಗಾಗಿ ೪. ಇತರ ಕೆಲಸಗಳಿಗಾಗಿ

೨೧. ತಿಂಗಳ ಆದಾಯ

೧. ೫೦೦ಕ್ಕಿಂತ ಕಡಿಮೆ ೨. ೫೦೦ರಿಂದ ೬೦೦ ೩. ೬೦೦ರಿಂದ ೮೦೦ ೪. ೧೦೦೦ಕ್ಕಿಂತ ಹೆಚ್ಚು

೨೨. ಬಿಡುವಿನ ವೇಳೆಯಲ್ಲಿ ನಿರ್ವಹಿಸುವ ಕೆಲಸಗಳು

೧. ಮನೆಕೆಲಸ ೨. ಮನೋರಂಜನೆ ೩. ಹೈನುಗಾರಿಕೆ ೪. ವಿಶ್ರಾಂತಿ ತೆಗೆದುಕೊಳ್ಳುವುದು

೨೩. ಹೊಂದಿರುವ ಸ್ವತ್ತುಗಳು

೧. ಹಸು, ಎಮ್ಮೆ, ಕುರಿ, ಮೇಕೆ, ಕೋಳಿ ೨. ಮೋಟಾರು, ಬಂಡಿ, ಸೈಕಲು

೨೪. ವಸತಿಯ ಸೌಕರ್ಯ

ವಾಸಿಸುವ ಮನೆ ೧. ಸ್ವಂತ ೨. ಬಾಡಿಗೆ ೩. ಭೂಮಾಲಿಕನ ಮನೆ

೨೫. ಮನೆಯ ನಮೂನೆ

೧. ಗುಡಿಸಲು ೨. ಹೆಂಚುಗಳನ್ನು ಹಾಕಿರುವುದು ೩. ಸರಕಾರದವರು ಕಟ್ಟಿಕೊಟ್ಟಂತಹ ಮನೆ ೪. ಮಣ್ಣು ಗೋಡೆ

೨೬. ಮನೆಗೆ ಇರುವ ಸೌಕರ್ಯ

೧. ಅಡುಗೆ ಮನೆ ೨. ಬಚ್ಚಲು ಮನೆ ೩. ಕಕ್ಕಸು, ಹಿತ್ತಲು

೨೭. ಮನೆ ಬಳಕೆಯ ನೀರಿನ ಮೂಲ

೧. ಸಾರ್ವಜನಿಕ ಬಾವಿ ೨. ಸಾರ್ವಜನಿಕ ನಲ್ಲಿ ೩. ನದಿ, ಕೆರೆ ೪. ಕೊಳವೆ ಬಾವಿ

೨೮. ವಿದ್ಯುತ್ ದೀಪದ ಸೌಕರ್ಯ ಇದೆ/ಇಲ್ಲ

೨೯. ಪಿತ್ರಾರ್ಜಿತ ಆಸ್ತಿ ಇದೆಯಾ ಇದೆ/ಇಲ್ಲ

೩೦. ಆರೋಗ್ಯ

೧. ಕಾಯಿಲೆಯಾದರೆ ಆಸ್ಪತ್ರೆಗೆ ಹೋಗುತ್ತೀರಾ? ಹೌದು/ಇಲ್ಲ

೨. ಕಾಯಿಲೆಯಾದರೆ ಏನು ಮದ್ದು ಕೊಡುವಿರಿ/ಪಡೆಯುವಿರಿ?

೧. ನಾಟಿ ಔಷಧಿ ೨. ಮನೆ ಮದ್ದು ೩. ಖಾಸಗಿ ಆಸ್ಪತ್ರೆಗೆ ೪. ಸರ್ಕಾರಿ ಆಸ್ಪತ್ರೆಗೆ

೩೧. ಬಿಸಿಲಲ್ಲಿ ಕೆಲಸ ಮಾಡುವುದರಿಂದ ಆಗುವ ಪರಿಣಾಮಗಳಿಂದ ಪಾರಾಗಲು ಏನು ಉಪಾಯ ಮಾಡುತ್ತೀರಿ

೧. ತಣ್ಣೀರಿನ ಬಟ್ಟೆ ಹಾಕಿಕೊಳ್ಳುತ್ತೇವೆ (ತಲೆಯ ಮೇಲೆ) ೨. ಪರಿಸ್ಥಿತಿಗೆ ಹೊಂದಿಕೊಳ್ಳುತ್ತೇವೆ.

೩. ಏನು ಮಾಡುವುದಿಲ್ಲ

೩೨. ಕಾಯಿಲೆಯಾದ ಮೊದಲ ಹಂತದಲ್ಲಿಯೇ ತೋರಿಸುತ್ತೀರಾ? ಹೌದು/ಇಲ್ಲ

೩೩. ಆರೋಗ್ಯಕ್ಕೆ ಹೆಚ್ಚಿನ ಪ್ರಾಮುಖ್ಯತೆ ಕೊಡುತ್ತೀರಾ? ಹೌದು/ಇಲ್ಲ

೩೪. ಹೆರಿಗೆ ಮನೆಯಲ್ಲಾದರೆ ಉತ್ತಮವೋ, ಆಸ್ಪತ್ರೆಯಲ್ಲಾದರೆ ಉತ್ತಮವೋ

೧. ಮನೆಯಲ್ಲಿ ೨. ಆಸ್ಪತ್ರೆಯಲ್ಲಿ

೩೫. ಮನೆಯಲ್ಲಾದರೆ ಉತ್ತಮ ಏಕೆ

೧. ಖರ್ಚು ಕಡಿಮೆಯಾಗುತ್ತದೆ ೨. ಅನುಭವಸ್ಥ ಸೂಲಗಿತ್ತಿಯರಿರುವುದರಿಂದ

೩೬. ಆಸ್ಪತ್ರೆಯಲ್ಲಾದರೆ ಉತ್ತಮ ಏಕೆ

೧. ವ್ಯವಸ್ಥಿತವಾದ ಕೋಣೆಗಳಿರುತ್ತವೆ ೨. ಅನೇಕ ಸೌಕರ್ಯಗಳಿರುತ್ತವೆ ೩. ನುರಿತ ವೈದ್ಯರಿರುವುದರಿಂದ ೪. ಅಪಘಾತ, ಸಾವುಗಳು ಸಂಭವಿಸುವುದಿಲ್ಲ

೩೭. ಆರೋಗ್ಯವೇ ಭಾಗ್ಯ ಈ ಮಾತಿಗೆ ನಿಮ್ಮ ಅಭಿಪ್ರಾಯವೇನು?

..................................................................

..................................................................

..................................................................

## ೨. ಪ್ರಮುಖ ವಕ್ತೃಗಳ ವಿವರ

ಬುದ್ಧ ನಗರ

| ಕ್ರ.ಸಂ. | ಹೆಸರು | ಜಾತಿ | ವಯಸ್ಸು | ವೃತ್ತಿ |
|---|---|---|---|---|
| ೧. | ಕಾಶಿಬಾಯಿ | ಹರಿಜನ | ೩೨ | ಟೈಲರಿಂಗ್ |
| ೨. | ಅಂಬಾಬಾಯಿ | " | ೨೫ | " |
| ೩. | ಶೀಲಾಬಾಯಿ | " | ೨೦ | " |
| ೪. | ಅನುಸೂಯಾ | " | ೨೮ | ಅಂಗನವಾಡಿ ಕಾರ್ಯಕರ್ತೆ |
| ೫. | ಯಶೋಧಾ | " | ೨೦ | ಅಂಗನವಾಡಿ ಸಹಾಯಕಿ |
| ೬. | ಮರೆಮ್ಮ | ಕಬ್ಬಲಿಗ | ೧೮ | ಕೃಷಿ |
| ೭. | ರಾಧಮ್ಮ | " | ೧೮ | " |
| ೮. | ಸುಮಂಗಲಾಬಾಯಿ | ಮಾದಿಗ | ೩೫ | ಕೂಲಿ |
| ೯. | ಕಾಶಿಬಾಯಿ | " | ೩೦ | " |
| ೧೦. | ಶಶಿಕಲಾ | " | ೨೫ | " |

ಇಂದಿರಾ ನಗರ

| ಕ್ರ.ಸಂ. | ಹೆಸರು | ಜಾತಿ | ವಯಸ್ಸು | ವೃತ್ತಿ |
|---|---|---|---|---|
| ೧. | ಸುನೀತಾ | ಹರಿಜನ | ೨೬ | ಟೈಲರಿಂಗ್ |
| ೨. | ಅಂಬಿಕಾ | " | ೨೦ | ವಿದ್ಯಾರ್ಥಿ |
| ೩. | ಇಂದುಬಾಯಿ | " | ೩೨ | ಕೂಲಿ |
| ೪. | ವಿಜಯಲಕ್ಷ್ಮಿ | ಕಬ್ಬಲಿಗ | ೨೫ | ಕೂಲಿ |
| ೫. | ಭಾರತಬಾಯಿ | ಹರಿಜನ | ೩೫ | ಕೂಲಿ |
| ೬. | ರತ್ನಾಬಾಯಿ | ಮಾದಿಗ | ೩೫ | ವ್ಯಾಪಾರಸ್ಥಳು |
| ೭. | ಸುಗಲಾಬಾಯಿ | " | ೩೫ | ವ್ಯಾಪಾರಸ್ಥಳು |
| ೮. | ಚಂದವ್ವ | " | ೪೦ | ಕೂಲಿ |
| ೯. | ರಾಮವ್ವ | " | ೩೪ | ಕೂಲಿ |
| ೧೦. | ದೇವಕಿಬಾಯಿ | " | ೨೮ | ಅಂಗನವಾಡಿ ಸಹಾಯಕಿ |

ಜಿಲಾನಾಬಾದ

| | | | | |
|---|---|---|---|---|
| ೧. | ಕೌಸರ | ಮುಸ್ಲಿಂ | ೨೨ | ಇಟ್ಟಂಗಿ ಬಟ್ಟಿಯಲ್ಲಿ ದುಡಿಯುವ ಮಹಿಳೆಯರು |
| ೨. | ಮಕ್ತುಮ | " | ೨೦ | " |
| ೩. | ಶಬಾನಾ | " | ೨೫ | " |
| ೪. | ಮೆಹಬೂಬಿ ಫಿರೋಜ | " | ೨೫ | " |
| ೫. | ಹಜರತಬಿ | " | ೨೮ | " |
| ೬. | ಯಾಸ್ಮಿನ್ | " | ೨೦ | " |
| ೭. | ಇಮಾಮಬಿರಾಜಾ | " | ೩೦ | " |
| ೮. | ಫಾತಿಮಾ | " | ೨೧ | " |
| ೯. | ಮೆಹರುನ್ನೀಸಾ | " | ೨೫ | " |
| ೧೦. | ಹುಸೇನಬಿ | " | ೩೦ | " |
| ಹೀರಾಪೂರ | | | | |
| ೧. | ಗಂಗಮ್ಮ | ಹರಿಜನ | ೩೫ | ಗಾರೆ ಕೆಲಸ |
| ೨. | ರಾಣಮ್ಮ | " | ೩೦ | " |
| ೩. | ಶಶಿಕಲಾ | " | ೪೦ | " |
| ೪. | ಭಾರತಬಾಯಿ | " | ೪೫ | " |
| ೫. | ಭೀಮಾಬಾಯಿ | " | ೪೦ | ಗೋದಾಮನಲ್ಲಿ ಕೂಲಿ ಕೆಲಸ |
| ೬. | ಶಿವನಿಂಗಮ್ಮ | ಹರಿಜನ | ೪೦ | " |
| ೭. | ಸೋನುಬಾಯಿ | " | ೩೫ | " |
| ೮. | ಮುಕ್ತಾಬಾಯಿ | " | ೫೦ | " |
| ೯. | ಶಾಂತಾಬಾಯಿ | " | ೪೫ | " |
| ೧೦. | ಸಿದ್ದಮ್ಮ | " | ೪೮ | " |
| ೧೧. | ನಾಗಮ್ಮ | " | ೪೬ | " |

ಡಾ. ಬಿ.ಆರ್.ಅಂಬೇಡ್ಕರ್ ಆಶ್ರಯ ಕಾಲೋನಿ

| | | | | |
|---|---|---|---|---|
| ೧. | ಮೆಹಬೂಬಿ ಸಯ್ಯದ್ | ಮುಸ್ಲಿಂ | ೨೫ | ಕಟ್ಟಿಗೆ ಮಾರುವುದು |
| ೨. | ಸುದರಾಬಿ | " | ೩೦ | ಬಡಿಗೆ ಕೆಲಸ |
| ೩. | ರೇಷ್ಮಾ ಸಯ್ಯದ್ ಜಿಲಾನಿ | " | ೨೫ | ಟೈಲರಿಂಗ್ |
| ೪. | ನಸಿಮಾ | " | ೪೦ | ಕೂಲಿ |
| ೫. | ಕವಿತಾ ಈರಣ್ಣ | ಐಗೊಳ | ೨೮ | ಖಾನಾವಳಿಯಲ್ಲಿ ರೊಟ್ಟಿ ಮಾಡುವುದು |
| ೬. | ಚಂದ್ರಕಲಾ ನಾಗಯ್ಯ ಸ್ವಾಮಿ | ಐಗೊಳ | ೩೦ | " |
| ೭. | ಪಾರ್ವತಿ ಬಂಡು | ಹರಿಜನ | ೩೩ | ಪಾತ್ರೆ ಮಾರುವುದು |
| ೮. | ಭಾರತಿ ರಮೇಶ | ಮರಾಠರು | ೨೯ | " |
| ೯. | ಅಂಬಿಕಾ ಸುರೇಶ | ಹಡಪದ | ೨೦ | ಟೈಲರಿಂಗ್ |
| ೧೦. | ಶೀಲಾಸಿದ್ದು | " | ೨೦ | ಟೈಲರಿಂಗ್ |

## ೩. ಕೋಷ್ಟಕಗಳು

### ೧. ಕುಟುಂಬವಾರು ಧರ್ಮದ ವಿವರ

| ಕ್ರ.ಸಂ. | ಧರ್ಮ | ಸಂಖ್ಯೆ | ಶೇಕಡಾವಾರು |
|---|---|---|---|
| ೧ | ಹಿಂದೂ | ೬೦ | ೭೫ |
| ೨ | ಮುಸ್ಲಿಂ | ೨೦ | ೨೫ |
| | ಒಟ್ಟು | ೮೦ | ೧೦೦.೦೦ |

ಅಧ್ಯಯನಕ್ಕೆಂದು ಆಯ್ದುಕೊಂಡಿರುವ ಐದು ಕೊಳಚೆ ಪ್ರದೇಶಗಳ ಕುಟುಂಬದ ಮಹಿಳೆಯರನ್ನು ಸಂದರ್ಶಿಸಿದಾಗ, ಕುಟುಂಬವಾರು ಧರ್ಮದ ವಿವರ ತಿಳಿದುಕೊಳ್ಳಲಾಯಿತು. ಈ ಪ್ರದೇಶಗಳಲ್ಲಿ ಹಿಂದೂಧರ್ಮದವರು ಹೆಚ್ಚಿನ ಸಂಖ್ಯೆಯಲ್ಲಿ ವಾಸಿಸುತ್ತಿದ್ದು ಶೇಕಡಾವಾರು ೭೫ ರಷ್ಟು ಹಿಂದೂ ಧರ್ಮದವರಿದ್ದರೆ, ಶೇ. ೨೫ರಷ್ಟು ಜನ ಮುಸ್ಲಿಂರು ಇದ್ದಾರೆ. ಸಾಮಾನ್ಯವಾಗಿ ಕೊಳಚೆ ಪ್ರದೇಶದಲ್ಲಿ ವಾಸಿಸುವಂತಹ ಜನರು ಹಿಂದೂ ಧರ್ಮದವರಾಗಿದ್ದು ಸ್ತರವಿನ್ಯಾಸದ ರಚನೆಯಲ್ಲಿ ಕೆಳ ಸ್ಥಾನವನ್ನು ಪಡೆದಂತಹ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡದ ಜನರುಗಳು ಹೆಚ್ಚಿನ ಸಂಖ್ಯೆಯಲ್ಲಿ ಕೊಳಚೆ ಪ್ರದೇಶಗಳಲ್ಲಿ ವಾಸಿಸುವವರಾಗಿದ್ದಾರೆ.

### ೨. ಕೌಟುಂಬಿಕ ವ್ಯವಸ್ಥೆಯ ವಿವರ

| ಕ್ರ.ಸಂ. | ಕುಟುಂಬ ವ್ಯವಸ್ಥೆ | ಕುಟುಂಬಗಳ ಸಂಖ್ಯೆ | ಶೇಕಡಾವಾರು |
|---|---|---|---|
| ೧. | ಅವಿಭಕ್ತ | ೧೫ | ೧೮.೭೫ |
| ೨. | ವಿಭಕ್ತ | ೬೫ | ೮೧.೨೫ |
| | | ೮೦ | ೧೦೦.೦೦ |

ಯಾವಾಗ ಆಧುನೀಕರಣ, ಕೈಗಾರಿಕರಣ, ಜಾಗತಿಕರಣಗಳು ಲಗ್ಗೆ ಇಟ್ಟವೊ ಆವಾಗ ಅದರ ಮೊದಲ ಪರಿಣಾಮ ಬೀರಿದ್ದು ಕುಟುಂಬಗಳ ಮೇಲೆ. ನಮ್ಮ ಸಮಾಜದಲ್ಲಿ ಕುಟುಂಬವು ಮಹತ್ವದ ಸ್ಥಾನವಹಿಸುತ್ತದೆ. ಕುಟುಂಬಕ್ಕೆ ಹೆಚ್ಚಿನ ಮಹತ್ವ ನೀಡಲಾಗಿದೆ. ಆದರೆ, ಜಾಗತೀಕರಣದ ಪ್ರಭಾವದಿಂದಾಗಿ, ಉದ್ಯೋಗವನ್ನು

ಅರಸಿಕೊಂಡು ಬೇರೊಂದು ಪ್ರದೇಶದಲ್ಲಿ ನೆಲೆ ನಿಲ್ಲುವಂತಾಯಿತು. ಹೀಗಾಗಿ ಕೊಳಚೆ ಪ್ರದೇಶಗಳಲ್ಲಿಯೂ ಕೂಡ ಮನೆಯ ಸದಸ್ಯರೆಲ್ಲರೂ ಉದ್ಯೋಗವನ್ನು ಮಾಡುತ್ತಾ, ತಮ್ಮ ಹೆಂಡತಿ, ಮಕ್ಕಳೊಂದಿಗೆ ತಮ್ಮದೇ ಸಂಸಾರವನ್ನು, ಕುಟುಂಬವನ್ನು ಕಟ್ಟಿಕೊಂಡರು. ಈ ಕಾರಣದಿಂದಾಗಿ ಅವಿಭಕ್ತ ಕುಟುಂಬಗಳು, ವಿಭಕ್ತ ಕುಟುಂಬಗಳಾಗಿ ಮಾರ್ಪಟ್ಟವು. ಇತ್ತೀಚಿನ ದಿನಗಳಲ್ಲಿ ಅವಿಭಕ್ತ ಕುಟುಂಬಗಳು ವಿರಳವಾಗುತ್ತಾ ಹೋಗುತ್ತಿವೆ. ವಿಭಕ್ತ ಕುಟುಂಬಗಳೇ ಹೆಚ್ಚಾಗುತ್ತಿವೆ. ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಂಡ ಪ್ರದೇಶಗಳ ಕುಟುಂಬ ವ್ಯವಸ್ಥೆಯಲ್ಲಿ ಶೇ. ೧೮.೭೫ರಷ್ಟು ಅವಿಭಕ್ತ ಕುಟುಂಬಗಳು ಕಂಡು ಬಂದರೆ ಶೇ. ೮೧.೨೫ ರಷ್ಟು ವಿಭಕ್ತ ಕುಟುಂಬಗಳಿರುವುದು ಕಂಡು ಬಂದಿತು. ಅವಿಭಕ್ತ ಕುಟುಂಬಗಳಿಗಿಂತ ವಿಭಕ್ತ ಕುಟುಂಬಗಳೇ ಹೆಚ್ಚಿನ ಪ್ರಮಾಣದಲ್ಲಿವೆ.

೩. ಸಾಕ್ಷರತೆಯ ವಿವರ

| ಕ್ರ.ಸಂ. | ಮಹಿಳಾ ಸಾಕ್ಷರರು | ಮಹಿಳೆಯರ ಸಂಖ್ಯೆ | ಶೇಕಡಾವಾರು |
|---|---|---|---|
| ೧. | ಅಕ್ಷರಸ್ಥರು | ೧೦ | ೧೨.೫೦ |
| ೨. | ಅನಕ್ಷರಸ್ಥರು | ೫೫ | ೬೮.೭೫ |
| ೩. | ಪ್ರಾಥಮಿಕ | ೧೦ | ೧೨.೫೦ |
| ೪. | ಪ್ರೌಢ | ೦೫ | ೦೬.೨೫ |
| | ಒಟ್ಟು | ೮೦ | ೧೦೦.೦೦ |

ಮೇಲಿನ ಕೋಷ್ಟಕವು ಕೊಳಚೆ ಪ್ರದೇಶದ ಮಹಿಳೆಯರ ಸಾಕ್ಷರತೆಯ ಪ್ರಮಾಣದ ವಿವರಣೆ ನೀಡುತ್ತದೆ. ಸಾಮಾನ್ಯವಾಗಿ ಕೊಳಚೆ ಪ್ರದೇಶದ ಮಹಿಳೆಯರಲ್ಲಿ ಅನಕ್ಷರಸ್ಥ ಮಹಿಳೆಯರ ಸಂಖ್ಯೆ ಹೆಚ್ಚಾಗಿದೆ. ಶಿಕ್ಷಣದಿಂದ ವಂಚಿತರಾಗಿರುವಂತಹ ಮಹಿಳೆಯರು, ಶಿಕ್ಷಣವನ್ನು ಪಡೆಯಬೇಕು ಎಂಬ ಹಂಬಲ ಅವರಲಿಲ್ಲ. ಇದಕ್ಕೆ ಕಾರಣವಾಗಿರುವ ಅಂಶವೆಂದರೆ ಬಡತನ, ಬಡತನದಿಂದಾಗಿ ಅವರು ಶಿಕ್ಷಣವನ್ನು ಮುಂದುವರೆಸಲಿಲ್ಲವೆಂದು ಸಂದರ್ಶನ ನಡೆಸಿದಾಗ ತಿಳಿದು ಬಂದ ಅಂಶವಾಗಿದೆ. ಚಿಕ್ಕ ವಯಸ್ಸಿನಲ್ಲಿಯೇ ಶಾಲೆಗೆ ಹೋಗುವ ಬದಲು, ದುಡಿಮೆಯಲ್ಲಿ ತೊಡಗುವ ಹೆಣ್ಣುಮಕ್ಕಳು, ಮನೆಯ ಭಾರವನ್ನು ಹೊರುವಲ್ಲಿಯೇ ಅನಕ್ಷರಸ್ಥರಾಗಿ ಬಿಡುತ್ತಾರೆ. ಅಕ್ಷರ ಜ್ಞಾನವಿಲ್ಲದ, ವ್ಯವಹಾರದ ಬಗ್ಗೆ ಮಾಹಿತಿಯು ಇರದಂತಹ ಮುಗ್ಧ ಕಾರ್ಮಿಕ ಮಹಿಳೆಯರು ಬಂಡವಾಳಶಾಹಿಗಳಿಂದ, ಉಳ್ಳವರಿಂದ ನಿರಂತರವಾಗಿ ಶೋಷಣೆಯನ್ನು ಅನುಭವಿಸುತ್ತಾ ಶೋಷಣೆಗೆ, ತಾರತಮ್ಯಕ್ಕೆ ಒಳಗಾಗುತ್ತಲೇ ಬರುತ್ತಿದ್ದಾರೆ, ಕ್ಷೇತ್ರಕಾರ್ಯ ಕೈಗೊಂಡು, ಸಂದರ್ಶಿಸಿದ ೮೦ ಜನ ಮಹಿಳೆಯರಲ್ಲಿ ಅನಕ್ಷರಸ್ಥ ಮಹಿಳೆಯರ ಪ್ರಮಾಣ ಹೆಚ್ಚಿದೆ. ಇವರ ಪ್ರಮಾಣ ಶೇ. ೬೨.೫ರಷ್ಟಿದ್ದರೆ, ಪ್ರಾಥಮಿಕ ಶಿಕ್ಷಣವನ್ನು ಪೂರ್ಣಗೊಳಿಸದೆ ಅರ್ಧದಲ್ಲಿಯೇ ಶಾಲೆ ಬಿಟ್ಟು ದುಡಿಯಲು ಹೊರಟ ಮಹಿಳೆಯರ ಪ್ರಮಾಣ ಶೇ. ೧೨.೫೦ರಷ್ಟಿದ್ದು ಇನ್ನೂ ಪ್ರಾಥಮಿಕ ಶಿಕ್ಷಣವನ್ನು

ಹೇಗೊ ಮುಗಿಸಿ, ಪ್ರೌಢ ಶಿಕ್ಷಣದ ಮೆಟ್ಟಿಲೇರಿ, ಪ್ರೌಢ ಶಿಕ್ಷಣವನ್ನು ಮುಗಿಸದೆ ಬಂದಿರುವವರ ಪ್ರಮಾಣ ಶೇ. ೬.೭೫ರಷ್ಟಿದೆ. ಪ್ರೌಢ ಶಿಕ್ಷಣವನ್ನು ಮುಗಿಸಿದ ಮಹಿಳೆಯು ತಮ್ಮ ಹೆಸರು, ಹಸ್ತಾಕ್ಷರ, ಅಲ್ಪಸ್ವಲ್ಪ ಓದಲು ಕಲಿತಿರುವುದು ಕ್ಷೇತ್ರ ಕಾರ್ಯದಿಂದ ತಿಳಿದು ಬಂದಿದೆ.

೪. ನೀವು ವಾಸಿಸುವ ಮನೆಯ ನಮೂನೆ

| ಕ್ರ.ಸಂ. | ವಿವರ | ಮ.ಸಂ. | ಶೇಕಡಾವಾರು |
|---|---|---|---|
| ೧. | ಗುಡಿಸಲು | ೩೦ | ೩೭.೫೦ |
| ೨. | ಹಂಚುಗಳನ್ನು ಹಾಕಿರುವುದು | ೧೦ | ೧೨.೫೦ |
| ೩. | ಕೊಳಚೆ ಪ್ರದೇಶ ನಿರ್ಮೂಲನವತಿಯಿಂದ ಕಟ್ಟಿಕೊಟ್ಟಂತ ಮನೆ | ೩೫ | ೪೩.೭೫ |
| ೪. | ಮಣ್ಣು ಗೋಡೆ | ೦೫ | ೦೬.೨೫ |
| | ಒಟ್ಟು | ೮೦ | ೧೦೦-೦೦ |

ಕೊಳಚೆ ಪ್ರದೇಶದವರು ವಾಸಿಸುವ ಮನೆಗಳು ಸಾಮಾನ್ಯವಾಗಿ ಗುಡಿಸಲುಗಳು, ವ್ಯವಸ್ಥಿತವಾಗಿರದ, ಅಸ್ತವ್ಯಸ್ತವಾಗಿ ತಾತ್ಕಾಲಿಕವಾಗಿ ಕಟ್ಟಿಕೊಂಡಂತಹ ಗುಡಿಸಲುಗಳು, ಹಳೆಯ ತಗಡು, ಚಾಪೆ, ಇಂತಹ ವಸ್ತುಗಳನ್ನು ಉಪಯೋಗಿಸಿಕೊಂಡು ಗುಡಿಸಲುಗಳನ್ನು ನಿರ್ಮಿಸಿಕೊಂಡಿರುವುದು ಕಂಡು ಬರುತ್ತದೆ. ಈ ಪ್ರದೇಶದಲ್ಲಿ ವಾಸಿಸುವ ಜನರಲ್ಲಿ ಶೇ. ೩೭.೫೦ರಷ್ಟು ಜನರು ಗುಡಿಸಲುಗಳಲ್ಲಿ ವಾಸಿಸುತ್ತಿದ್ದರೆ, ಶೇ. ೧೨,೫೦ರಷ್ಟು ಜನರು ಹಂಚುಗಳನ್ನು ಹಾಕಿರುವ ಮನೆಗಳಲ್ಲಿ ವಾಸ ಮಾಡುತ್ತಾರೆ. ಇನ್ನೂ ಕೆಲವು ಜನರು ಶೇ. ೪೩.೭೫ರಷ್ಟು ಜನರು ಕೊಳಚೆ ಪ್ರದೇಶ ನಿರ್ಮೂಲನ ಮಂಡಳಿಯ ವತಿಯಿಂದ ಕಟ್ಟಿಕೊಂಡಂತಹ ಮನೆಗಳಲ್ಲಿ ವಾಸ ಮಾಡುತ್ತಾರೆ. ಮತ್ತು ಉಳಿದಂತೆ ಶೆ. ೬.೨೫ರಷ್ಟು ಜನರು ಮಣ್ಣಿನಿಂದ ನಿರ್ಮಿಸಿರುವಂತಹ ಮನೆಗಳಲ್ಲಿ ವಾಸ ಮಾಡುತ್ತಿದ್ದುದು ಕಂಡು ಬಂದಿತು. ಈ ಪ್ರದೇಶಗಳಲ್ಲಿ ಕೊಳಚೆ ನಿರ್ಮೂಲನ ಮಂಡಳಿಯ ವತಿಯಿಂದ ಮನೆಗಳನ್ನು ಕಟ್ಟಿಕೊಟ್ಟಿರುವುದರ ಪ್ರಮಾಣವೇ ಹೆಚ್ಚಿದೆ. ಈ ನಿರ್ಮೂಲನ ಮಂಡಳಿಯವರು ಕೆಲವೊಂದು ಪ್ರದೇಶಗಳಲ್ಲಿ ವಾಸಿಸಲು ಯೋಗ್ಯವಾಗಿರುವಂತಹ ಮನೆಗಳನ್ನು ಕಟ್ಟಿಕೊಟ್ಟಿದ್ದಾರೆ. ಇನ್ನೂ ಕೆಲವೆಡೆ ಈ ಪ್ರದೇಶದವರು ಮನೆಗಳನ್ನು ನಿರ್ಮಿಸದೇ ನಿರ್ಲಕ್ಷ್ಯವಹಿಸಿರುವುದು ಕಂಡು ಬಂದಿದೆ.

**೫. ಒಂದು ದಿನದ ಕೂಲಿಯ ಆದಾಯ ಎಷ್ಟು ದೊರೆಯುತ್ತದೆ**

| ಕ್ರ.ಸಂ. | ವಿವರಗಳು | ಮ. ಸಂ. | ಶೇಕಡಾವಾರು |
|---|---|---|---|
| ೧. | ೨೦ ರೂ. | ೨೦ | ೨೫.೦೦ |
| ೨. | ೩೫ ರೂ | ೪೦ | ೫೦.೦೦ |
| ೩. | ೫೫ಕ್ಕಿಂತ ಹೆಚ್ಚು | ೨೦ | ೨೫.೦೦ |
| | ಒಟ್ಟು | ೮೦ | ೧೦೦.೦೦ |

ಅಸಂಘಟಿತ ವಲಯದ ದುಡಿಮೆಗಳಲ್ಲಿ ದುಡಿಯುವವರಲ್ಲಿ ಈ ಕೊಳಚೆ ಪ್ರದೇಶದ ಮಹಿಳೆ ಮತ್ತು ಪುರುಷರು ಪ್ರಮುಖರಾಗಿದ್ದಾರೆ. ಈ ದುಡಿಮೆಗಾರರು ದಿನಕೂಲಿಯನ್ನು ಅವಲಂಬಿಸಿದ್ದಾರೆ. ಅವರ ದುಡಿಮೆಗೆ ಒಂದು ದಿನಕ್ಕೆ ೩೫ ರೂಪಾಯಿಗಳ ಕೂಲಿಯನ್ನು ಪಡೆಯುತ್ತಾರೆ. ಶೇ. ೫೦ರಷ್ಟು ಮಹಿಳೆಯರು ಉತ್ತರಿಸಿದರೂ, ಇವರಿಗೆ ದೊರೆಯುವಂತಹ ಕೂಲಿಯು ಅವರ ಶ್ರಮಕ್ಕೆ ತಕ್ಕದಾಗಿರುವುದಿಲ್ಲ. ಅಧಿಕ ಶ್ರಮ ಕಡಿಮೆ ಕೂಲಿ ಎನ್ನುವುದನ್ನು ಪಾಲಿಸಿಕೊಂಡು ಬರುತ್ತಿರುವ ಬಂಡವಾಳಶಾಹಿಗಳು, ತಮ್ಮ ಕೆಲಸವನ್ನು ಇಂತಹ ಕಾರ್ಮಿಕರಿಂದ ಕಡಿಮೆ ಕೂಲಿಗೆ ಮಾಡಿಸಿಕೊಳ್ಳುತ್ತಾರೆ. ಬಂಡವಾಳಶಾಹಿಗಳ ಈ ನೀತಿಯು ದುಡಿಯುವ ಮಹಿಳಾ ಕಾರ್ಮಿಕರ ಮೇಲೆ ಕೆಟ್ಟ ಪರಿಣಾಮವನ್ನು ಬೀರುತ್ತದೆ, ಮತ್ತು ಬಂದಂತಹ ಆದಾಯದಿಂದ ಬಂಡವಾಳ ಶಾಹಿಗಳು ಮತ್ತಷ್ಟು ಶ್ರೀಮಂತರಾಗುತ್ತಾ ಹೋಗುತ್ತಿದ್ದಾರೆ. ಬಡ ಕೂಲಿಕಾರ್ಮಿಕರು ಬಡವರಾಗಿಯೇ ಉಳಿಯುತ್ತಿದ್ದಾರೆ. ಸಂದರ್ಶಿಸಿದ ಒಟ್ಟು ಮಹಿಳೆಯರು ಒಂದು ದಿನದ ಕೂಲಿಯಲ್ಲಿ ಶೇ. ೨೫ರಷ್ಟು ಮಹಿಳೆಯರು ರೂ. ೨೦ನ್ನು, ಶೇ. ೫೦ರಷ್ಟು ಮಹಿಳೆಯರು ರೂ. ೩೫ ಮತ್ತು ರೂ. ೫೫ಕ್ಕಿಂತ ಹೆಚ್ಚು ಕೂಲಿಯನ್ನು ಪಡೆಯುವವರು ಇದ್ದಾರೆ. ರೂ. ೫೫ಕ್ಕಿತಲೂ ಹೆಚ್ಚು ಕೂಲಿಯನ್ನು ಪಡೆಯುವ ಮಹಿಳೆಯರು ಗಾರೆ ಕೆಲಸ, ಮನೆಕಟ್ಟುವಂತಹ ಕೆಲಸಗಳಲ್ಲಿ ತೊಡಗಿಕೊಂಡಿರುತ್ತಾರೆ ಎಂದು ಕ್ಷೇತ್ರಕಾರ್ಯದಿಂದ ತಿಳಿದು ಬಂದ ಅಂಶವನ್ನು ಕೋಷ್ಟಕ ರೂಪದಲ್ಲಿ ವಿವರಿಸಲಾಗಿದೆ.

**೬. ನಿಮ್ಮ ಕುಟುಂಬದ ತಿಂಗಳ ಆದಾಯ ಎಷ್ಟು**

| ಕ್ರ.ಸಂ. | ವಿವರ | ಮ.ಸಂಖ್ಯೆ | ಶೇಕಡಾವಾರು |
|---|---|---|---|
| ೧. | ೫೦೦ ಕ್ಕಿಂತ ಕಡಿಮೆ | ೨೦ | ೨೫.೦೦ |
| ೨. | ೫೦೦ ರಿಂದ ೬೦೦ | ೪೦ | ೫೦.೦೦ |
| ೩. | ೬೦೦ ರಿಂದ ೭೦೦ | ೧೫ | ೧೮.೭೫ |
| ೪. | ೭೦೦ ಕ್ಕಿಂತ ಹೆಚ್ಚು | ೦೫ | ೦೬.೨೫ |
| | ಒಟ್ಟು | ೮೦ | ೧೦೦.೦೦ |

ಮೇಲಿನ ಕೋಷ್ಟಕವು ಸಂದರ್ಶನಕ್ಕೆಂದು ಆಯ್ದುಕೊಂಡಿರುವ, ಕೊಳಚೆ ಪ್ರದೇಶಗಳ ಮಹಿಳೆಯರ, ಕುಟುಂಬವಾರು ಮಾಸಿಕ ಆದಾಯವನ್ನು ತಿಳಿಸಿಕೊಡುತ್ತದೆ, ಸಂದರ್ಶಿಸಿದ ಒಟ್ಟು ಮಹಿಳೆಯರ ಕುಟುಂಬದ ಆದಾಯವು ಶೇ. ೫೦ರಷ್ಟು ಮಹಿಳೆಯರು ೫೦೦ರಿಂದ ೬೦೦ರವರೆಗೆ ಇದೆ ಎಂದು ಉತ್ತರಿಸಿದರು, ಇವರು ಮಾಡುವ ಕೆಲಸದಿಂದ ಕಡಿಮೆ ಕೂಲಿ ದೊರೆಯುತ್ತದೆ. ಮನೆಯಲ್ಲಿ ಸದಸ್ಯರ ಸಂಖ್ಯೆ ಹೆಚ್ಚಿದ್ದು ದುಡಿಯುವವರ ಸಂಖ್ಯೆ ಕಡಿಮೆ ಇರುವುದರಿಂದ ಇವರ ಮಾಸಿಕ ಆದಾಯ ೫೦೦ರಿಂದ ೬೦೦ರವರೆಗೆ ಇದೆ. ಮತ್ತು ೬೦೦ರಿಂದ ೭೦೦ರವರೆಗೆ ಇರುವ ಮಹಿಳೆಯರ ಪ್ರಮಾಣ ಶೇ. ೧೮.೭೫ರಷ್ಟಿದ್ದರೆ. ೭೦೦ಕ್ಕಿಂತ ಹೆಚ್ಚು ಮಾಸಿಕ ಆದಾಯಗಳಿಸುವ ಮಹಿಳೆಯರ ಪ್ರಮಾಣ ಶೇ. ೬.೨೫ರಷ್ಟಿದೆ ೭೦೦ಕ್ಕಿಂತ ಹೆಚ್ಚು ಆದಾಯವನ್ನು ಹೊಂದಿರುವ ಮಹಿಳೆಯರು ಗೋದಾಮುಗಳಲ್ಲಿ ದುಡಿಯುವವರಾಗಿದ್ದಾರೆ ಮತ್ತು ಇಟ್ಟಂಗಿಭಟ್ಟಿಯಲ್ಲಿ ದುಡಿಯುವ ಮಹಿಳೆಯರ ಮಾಸಿಕ ಆದಾಯವಾಗಿದೆ. ಮಹಿಳೆಯರು ಮೈಮುರಿದು ದುಡಿಮೆ ಮಾಡಿದರೂ ಅವರ ಆದಾಯ ಮನೆಯ ಖರ್ಚುವೆಚ್ಚಗಳನ್ನು ನೋಡಿಕೊಂಡು ಹೋಗುವುದರಲ್ಲೇ ಸರಿಹೊಂದುತ್ತದೆ. ಉಳಿತಾಯ ಮಾಡುವುದು ಈ ಪ್ರದೇಶದ ಮಹಿಳೆಯರಿಗೆ ದೂರದ ಮಾತಾಗಿದೆ.

**೭. ಕೂಲಿಯನ್ನು ಪಡೆಯುವ ಬಗೆ**

| ಕ್ರ.ಸಂ. | ವಿವರ | ಮ.ಸಂಖ್ಯೆ | ಶೇಕಡಾವಾರು |
|---|---|---|---|
| ೧. | ಕೂಲಿ ಮಾತ್ರ | ೬೦ | ೭೫ |
| ೨. | ಕೂಲಿ ಜೊತೆ ಊಟ | ೨೦ | ೨೫ |
| ೩. | ದವಸ ಧಾನ್ಯಗಳು ಮತ್ತು ಊಟ | - | - |
| | ಒಟ್ಟು | ೮೦ | ೧೦೦.೦೦ |

ಮೇಲಿನ ಕೋಷ್ಟಕವು ಕೊಳಚೆ ಪ್ರದೇಶದಲ್ಲಿ ವಾಸಿಸುವ ಮಹಿಳೆಯರು ದುಡಿಯುವ ಕೆಲಸದಿಂದ ಸಿಗುವ ಕೂಲಿಯ ಪ್ರಮಾಣವನ್ನು ತೋರಿಸಿಕೊಡುತ್ತದೆ. ಅಸಂಘಟಿತ ವಲಯದಲ್ಲಿ ದುಡಿಯುವ ಮಹಿಳೆಯರಿಗೆ ದೊರೆಯುವ ಒಂದು ದಿನದ ಕೂಲಿಯನ್ನು ಮೂರು ರೀತಿಯಲ್ಲಿ ವರ್ಗೀಕರಿಸಲಾಗಿದೆ, ಮೊದಲನೆಯದರಲ್ಲಿ ಕೂಲಿ ಮಾತ್ರ ಪಡೆಯುವಂತಹ ದುಡಿಮೆಗಾರರ ಪ್ರಮಾಣ ಶೇ. ೭೫ ರಷ್ಟಿದೆ. ಈ ದುಡಿಮೆಗಾರರೂ, ಗಾರೆ ಕೆಲಸ, ಕಟ್ಟಡ ನಿರ್ಮಾಣ ಮಾಡುವಂತಹ ಕೆಲಸಗಳಲ್ಲಿ ತೊಡಗಿಸಿಕೊಂಡಿದ್ದು, ಅಧಿಕ ಶ್ರಮಕ್ಕೆ ಕಡಿಮೆ ಕೂಲಿಯನ್ನು ಪಡೆಯುವವರಾಗಿದ್ದಾರೆ, ಅದೇ ರೀತಿಯಾಗಿ ಕೂಲಿಯ ಜೊತೆಗೆ ಊಟವನ್ನು ಪಡೆಯುವವರದು ಒಂದು ವರ್ಗೀಕರಣವಿದೆ. ಇಲ್ಲಿ ಕೂಲಿಯ ಜೊತೆಗೆ ಊಟವನ್ನು ಪಡೆಯುವ ಮಹಿಳಾ ದುಡಿಮೆಗಾರರ ಪ್ರಮಾಣ ಶೇ. ೨೫ರಷ್ಟಿದೆ. ಈ ದುಡಿಮೆಗಾರರು ಮನೆಮನೆಗಳಿಗೆ ಹೋಗಿ ಕಸ, ಮುಸುರೆ, ಪಾತ್ರೆ, ಬಟ್ಟೆಗಳನ್ನು ಸ್ವಚ್ಛಗೊಳಿಸುವ ಮಹಿಳೆಯರು ಈ ವರ್ಗೀಕರಣದಲ್ಲಿ ಬರುತ್ತಾರೆ. ಇವರುಗಳು ಕೂಲಿಯ ಜೊತೆಗೆ ಊಟವನ್ನು ಪಡೆಯುವಂಥವರಾಗಿದ್ದಾರೆ. ಆದರೆ ದವಸ ಧಾನ್ಯ ಮತ್ತು ಊಟ ಪಡೆಯುವವರ

ವರ್ಗೀಕರಣದಲ್ಲಿ ಮಹಿಳೆಯರು ಇಲ್ಲ. ಇದಕ್ಕೆ ಕಾರಣ, ಮನೆಮನೆಗಳಿಗೂ ಹೋಗಿ ದುಡಿಯುವ ಮಹಿಳೆಗೆ ಕೂಲಿಯ ಜೊತೆಗೆ ಊಟ ಕೊಡುವುದರಿಂದ ಅವರಿಗೆ ದವಸಧಾನ್ಯಗಳನ್ನು ಕೊಡುವುದು ತುಂಬಾ ಅಪರೂಪ. ಒಂದು ವೇಳೆ ಕೊಟ್ಟಿದ್ದೆ ಆದರೆ, ಅದು ತುಂಬಾ ಹಳೆಯದಾಗಿರುವ, ಜೈವಿಕಾಂಶಗಳು ಕಡಿಮೆಯಾಗಿರುವ, ಹುಳ ಹತ್ತಿರುವಂತಹ, ತಿನ್ನಲು ಯೋಗ್ಯವಲ್ಲದ ಧಾನ್ಯಗಳನ್ನು ಕೊಟ್ಟಿರುತ್ತಾರೆ. ಎಲ್ಲೊ ಕೆಲವೊಬ್ಬ ಯಜಮಾನರು ಒಳ್ಳೆಯ ದವಸ ಧಾನ್ಯಗಳನ್ನ ಕೊಡಬಹುದು. ಇಲ್ಲದೇ ಇದ್ದರೆ ಅದು ಇಲ್ಲ.

**೮. ಕೂಲಿಯನ್ನು ಖರ್ಚು ಮಾಡುವ ಬಗೆ**

| ಕ್ರ.ಸಂ. | ವಿವರ | ಮ.ಸಂಖ್ಯೆ | ಶೇಕಡವಾರು |
|---|---|---|---|
| ೧. | ಸ್ವಂತಕ್ಕಾಗಿ | ೦೫ | ೦೬.೨೫ |
| ೨. | ಮನೆಗಾಗಿ | ೪೦ | ೫೦.೦೦ |
| ೩. | ಸಂಬಂಧಿಗಳಿಗಾಗಿ | ೧೦ | ೧೨.೫೦ |
| ೪. | ಇತರ ಕೆಲಸಗಳಿಗಾಗಿ | ೨೫ | ೩೧.೨೫ |
| | ಒಟ್ಟು | ೮೦ | ೧೦೦.೦೦ |

ಕೊಳಚೆ ಪ್ರದೇಶದಲ್ಲಿ ದುಡಿಯುವ ಮಹಿಳಾ ದುಡಿಮೆಗಾರರಿಗೆ ತಾವು ದುಡಿದು ತಂದಂತಹ ಕೂಲಿಯನ್ನು ಹೇಗೆ ಖರ್ಚು ಮಾಡುತ್ತೀರಿ, ಯಾವ ಯಾವ, ಕೆಲಸಗಳಿಗೆ ಹೆಚ್ಚು ಖರ್ಚು ಮಾಡುತ್ತೀರಿ ಎಂಬ ಪ್ರಶ್ನೆಗೆ, ಅವರು ಸ್ವಂತಕ್ಕಾಗಿ ಎಂದು ಶೇ. ೬.೨೫ರಷ್ಟು ಮಹಿಳೆಯರು ಉತ್ತರಿಸಿದರು, ಅದೇ ರೀತಿಯಾಗಿ ತಮ್ಮ ಮನೆಯ ಖರ್ಚು ವೆಚ್ಚಗಳಿಗಾಗಿ ತಾವು ದುಡಿದು ತಂದ ಹಣದಲ್ಲಿ ಶೇ. ೫೦ರಷ್ಟು ಮನೆಗಾಗಿ ಖರ್ಚು ಮಾಡುತ್ತಾರೆಂದು ತಿಳಿಸಿದರು, ಅವರು ಸಂಬಂಧಿಗಳಿಗಾಗಿ ಖರ್ಚು ಮಾಡುವುದರ ಪ್ರಮಾಣ ಶೇ. ೧೨.೫೦ರಷ್ಟಿದ್ದು, ಮದುವೆ, ಶುಭಕಾರ್ಯಗಳಿಗೆ, ಆಸ್ಪತ್ರೆಗೆ ಹೀಗೆ ಇತರ ಖರ್ಚುಗಳಿಗಾಗಿ ತಮ್ಮ ಕೂಲಿಯ ಹಣವನ್ನು ಖರ್ಚು ಮಾಡುವ ಪ್ರಮಾಣ ಶೇ. ೩೧.೨೫ರಷ್ಟಿದೆ ಎಂದು ತಿಳಿದು ಬರುತ್ತದೆ.

**೯. ವರ್ಷದ ಅವಧಿಯಲ್ಲಿ ಕೆಲಸ ನಿರ್ವಹಿಸುವ ದಿನಗಳು ಮತ್ತು ಗಂಟೆಗಳು**

| ಕ್ರ.ಸಂ. | ಉದ್ಯೋಗಗಳು | ದಿನಗಳು | ಗಂಟೆಗಳು |
|---|---|---|---|
| ೧. | ಇಟ್ಟಂಗಿ ಭಟ್ಟಿ | ೧೮೦ | ೭ರಿಂದ ೮ |
| ೨. | ಚಾಪೆ ಮಾರುವುದು | ೨೪೦ | ೭ರಿಂದ ೮ |
| ೩. | ಗಾರೆ ಕೆಲಸ | ೨೪೦ | ೮ರಿಂದ ೧೦ |
| ೪. | ಇತರ ಕೆಲಸಗಳು | ೩೬೦ | ೧೦ರಿಂದ ೧೫ |

ಅಧ್ಯಯನಕ್ಕೆಂದು ಆಯ್ದುಕೊಂಡಿರುವ ಕೊಳಚೆ ಪ್ರದೇಶಗಳ ಮಹಿಳೆಯರ ಒಂದು ವರ್ಷದ ಅವಧಿಯಲ್ಲಿ ತಾವು ದುಡಿಯುವಂತಹ ದಿನಗಳು ಮತ್ತು ಒಂದು ದಿನದಲ್ಲಿ ಎಷ್ಟು ಗಂಟೆಗಳವರೆಗೆ ದುಡಿಮೆಯಲ್ಲಿ ತೊಡಗಿಕೊಂಡಿರುತ್ತಾರೆಂದ ಮೇಲಿನ ಕೋಷ್ಟಕದ ವಿವರಣೆಯಿಂದ ತಿಳದು ಬರುತ್ತದೆ. ಒಂದು ವರ್ಷದ ಅವಧಿಯಲ್ಲಿ ೨೪೦ ದಿನಗಳ(ಎಂಟು ತಿಂಗಳು)ವರೆಗೆ ದುಡಿಯುವವರು ಇದ್ದಾರೆ. ಈ ಅವಧಿಯಲ್ಲಿ ದುಡಿಯುವ ಮಹಿಳೆಯರು ಚಾಪೆ ಮಾರುವುದು, ಗಾರೆ ಕೆಲಸಗಳನ್ನು ನಿರ್ವಹಿಸುವವರಾಗಿದ್ದಾರೆ. ಬಯಲು ಸೀಮೆ ಪ್ರದೇಶವೆಂದೇ ಹೆಸರು ಪಡೆದಿರುವ ಗುಲಬರ್ಗಾ ನಗರದಲ್ಲಿ ಬಿಸಿಲು ಹೆಚ್ಚಿನ ಪ್ರಮಾಣದಲ್ಲಿರುವುದರಿಂದ, ಈ ನಗರದಲ್ಲಿ ಗಾರೆ ಕೆಲಸ ಮತ್ತು ಚಾಪೆ ಮಾರುವಂತಹ ಮಹಿಳೆಯರು ವರ್ಷದಲ್ಲಿ ೨೪೦ ದಿನಗಳನ್ನು ದುಡಿಯಲು ಮೀಸಲಿಟ್ಟಿರುತ್ತಾರೆ. ಮತ್ತು ಒಂದು ದಿನದಲ್ಲಿ ಸುಮಾರು ೭ರಿಂದ ೮ ಗಂಟೆಯವರೆಗೂ ಮತ್ತು ಕೆಲವು ಬಾರಿ ೧೦ ಗಂಟೆ ಸಮಯದವರೆಗೂ ದುಡಿಮೆಯಲ್ಲಿ ತೊಡಗಿಸಿಕೊಂಡಿರುತ್ತಾರೆ. ಅದೇ ರೀತಿಯಾಗಿ ಇತರ ಕೆಲಸಗಳನ್ನು ನಿರ್ವಹಿಸುವವರು (ತರಕಾರಿ ಮಾರಾಟ ಮಾಡುವುದು, ಬೀಡಿ ಕಟ್ಟುವುದು, ವ್ಯಾಪಾರಸ್ಥರು ಮತ್ತು ಮನೆಕೆಲಸ) ವರ್ಷಪೂರ್ತಿ ದುಡಿಯುತ್ತಾರೆ, ಇವರು ದುಡಿಯುವ ಅವಧಿ ಹತ್ತು ಗಂಟೆಯಿಂದ ಹದಿನೈದು ಗಂಟೆಗಳಾಗಿರುತ್ತವೆ. ಇಟ್ಟಂಗಿಭಟ್ಟಿಯಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ಮಾತ್ರ ಒಂದು ವರ್ಷದ ಅವಧಿಯಲ್ಲಿ ಕೇವಲ ೧೮೦ ದಿನಗಳ(ಆರು ತಿಂಗಳು)ವರೆಗೆ ಮಾತ್ರ ದುಡಿಯುತ್ತಾರೆ. ಈ ಆರು ತಿಂಗಳು ಬೇಸಿಗೆಯ ಕಾಲವಾದ್ದರಿಂದ, ಬೇಸಿಗೆ ಕಾಲ ಇಟ್ಟಂಗಿಗಳ ನಿರ್ಮಾಣಕ್ಕೆ ಸೂಕ್ತವಾದ ಕಾಲವಾಗಿದೆ. ಈ ಆರು ತಿಂಗಳ ಅವಧಿಯವರೆಗೆ ಮಾತ್ರ ದುಡಿಮೆಯಲ್ಲಿ ತೊಡಗಿರುತ್ತಾರೆ. ಮತ್ತು ಉಳಿದ ದಿನಗಳಲ್ಲಿ ಕೂಲಿ ಕೆಲಸ, ಗಾರೆ ಕೆಲಸ, ಕಟ್ಟಡ ನಿರ್ಮಾಣ ಮತ್ತು ತರಕಾರಿ ಮಾರಾಟ ಮಾಡುವಂತಹ ದುಡಿಮೆಗಳಲ್ಲಿ ತೊಡಗಿರುತ್ತಾರೆ ಎಂಬುದು ಕ್ಷೇತ್ರಕಾರ್ಯದಿಂದ ತಿಳಿದು ಬಂದಿದೆ.

**೧೦. ವಿಶ್ರಾಂತಿ ಸಮಯದಲ್ಲಿ ಮಹಿಳೆಯರು ನಿರ್ವಹಿಸುವ ಕೆಲಸ**

| ಕ್ರ.ಸಂ. | ಕೆಲಸ | ಮಹಿಳೆಯರು | ಶೇಕಡಾವಾರು |
|---|---|---|---|
| ೧. | ಮನೆಕೆಲಸ | ೫೦ | ೬೨.೫೦ |
| ೨. | ವಿಶ್ರಾಂತಿ | ೧೦ | ೧೨.೫೦ |
| ೩. | ಇತರ ಕೆಲಸ | ೨೦ | ೨೫.೦೦ |
| | ಒಟ್ಟು | ೮೦ | ೧೦೦.೦೦ |

ಕೊಳಚೆ ಪ್ರದೇಶದಲ್ಲಿ ವಾಸಿಸುವ ಮಹಿಳೆಯರೆಲ್ಲರೂ ದುಡಿಯುವವರೆ ಆಗಿದ್ದು, ಕಾಲಹರಣವನ್ನು ಮಾಡುತ್ತಾ ಕುಳಿತುಕೊಂಡರೇ ತಮಗೆ ಉಪವಾಸವೇ ಗತಿ ಎಂಬ ಅಂಶವು ಅವರ ಮನೋಲೋಕದಲ್ಲಿ ಬೇರುಬಿಟ್ಟು ಕುಳಿತಿಕೊಂಡಿದೆ. ಹೀಗಿರುವಾಗ ಇವರಿಗೆ ದೊರೆತ ಸ್ವಲ್ಪ ಸಮಯದಲ್ಲಿ, ದುಡಿಮೆಯಿಂದ

ಹೊರಬಂದು, ವಿಶ್ರಾಂತಿಯನ್ನು ತೆಗೆದುಕೊಳ್ಳುವಂತೆಯೂ ಇಲ್ಲ, ದುಡಿದು ದಣಿದು ಮನೆಗೆ ಬಂದು ವಿಶ್ರಾಂತಿ ತೆಗೆದುಕೊಳ್ಳಬೇಕೆಂದರೆ ಮತ್ತೆ ಮನೆಕೆಲಸಗಳು ಎದುರುಗೊಳ್ಳುತ್ತವೆ, ಈ ಮಹಿಳೆಯರಿಗೆ ತನ್ನ ಮಕ್ಕಳನ್ನು ತಾನೇ ಪೋಷಿಸುವ ಮಹತ್ತರವಾದ ಜವಾಬ್ದಾರಿ ಇದೆ. ಜೀವನಕ್ಕೆ ಅವಶ್ಯಕವಾದ ಆಹಾರ ಪೋಷಣೆಯ ವಿಷಯದಲ್ಲಿ ಅವಳ ಜವಾಬ್ದಾರಿ ಹೆಚ್ಚು. ಇಂತಹ ಸಂದರ್ಭಗಳಿದ್ದಾಗ ಆಕೆಗೆ ಬಿಡುವು ಅಸಾಧ್ಯದ ಮಾತು. ಅವಳು ನಿರ್ವಹಿಸುವ ಕೆಲಸಗಳಲ್ಲಿ ಮನೆ ಕೆಲಸದ ಪ್ರಮಾಣ ಶೇ. ೬೨.೫ರಷ್ಟಿದ್ದರೆ, ಇತರ ಕೆಲಸಗಳನ್ನು ನಿಭಾಯಿಸಿಕೊಂಡು ಹೋಗುವುದರ (ಸಂಬಂಧಿಕರ ಮನೆಗೆ ಹೋಗುವುದರ, ಶುಭಕಾರ್ಯಗಳಲ್ಲಿ ಪಾಲ್ಗೊಳ್ಳುವುದರ) ಪ್ರಮಾಣ ಶೇ. ೨೫ರಷ್ಟಿದ್ದು, ಈ ಎಲ್ಲ ಕೆಲಸಗಳಿಂದ ಬಿಡುವು ದೊರೆತಾಗ ಮಾತ್ರ ವಿಶ್ರಾಂತಿಯನ್ನು ತೆಗೆದುಕೊಳ್ಳುತ್ತಾಳೆ, ಅವಳು ಬಿಡುವಿನ ಸಮಯದಲ್ಲಿ ವಿಶ್ರಾಂತಿಗೆ ಮೀಸಲಿಟ್ಟ ಪ್ರಮಾಣ ೧೨.೫ರಷ್ಟು ಮಾತ್ರವೇ ಇದೆ. ಹೊರಗೂ, ಒಳಗೂ ದುಡಿಯುವ ಹೆಣ್ಣಿಗೆ ವಿಶ್ರಾಂತಿಯು ಬಹಳ ಮುಖ್ಯವಾಗಿರುತ್ತದೆ. ಆದರೆ ಕೆಲಸದಿಂದ ಬಿಡುವು ದೊರೆಯದೇ ಇದ್ದ ಸಂದರ್ಭದಲ್ಲಿ ವಿಶ್ರಾಂತಿ ತೆಗೆದುಕೊಳ್ಳುವುದು ಕಷ್ಟದ ಮಾತೇ ಆಗಿದೆ.

೧೧. ಅನಾರೋಗ್ಯದಿಂದ ಬಳಲುತ್ತಿರುವ ಸಂದರ್ಭದಲ್ಲಿ ಆಸ್ಪತ್ರೆಗೆ ಹೋಗುತ್ತೀರಾ

| ಕ್ರ.ಸಂ. | ವಿವರ | ಮಹಿಳೆಯರ ಸಂಖ್ಯೆ | ಶೇಕಡಾ |
|---|---|---|---|
| ೧. | ಹೌದು | ೫೦ | ೬೨.೫೦ |
| ೨. | ಇಲ್ಲ | ೩೦ | ೩೭.೫೦ |
| | ಒಟ್ಟು | ೮೦ | ೧೦೦.೦೦ |

ಕೊಳಚೆ ಪ್ರದೇಶದಲ್ಲಿ ವಾಸಿಸುತ್ತಿರುವ ಜನರು, ಅನೇಕ ರೋಗಗಳಿಗೆ ತುತ್ತಾಗುತ್ತಾರೆ. ಆ ಪ್ರದೇಶಗಳಲ್ಲಿರುವಂತಹ ನೈರ್ಮಲ್ಯರಹಿತವಾದ ವಾತಾವರಣ, ಕಲುಷಿತಗೊಂಡಂತಹ, ತೆರೆದಿಟ್ಟಂತಹ ಆಹಾರ ಸೇವನೆ ಮಾಡುವುದರಿಂದ ಈ ಪ್ರದೇಶದ ಜನರು ಅನಾರೋಗ್ಯಗಳಿಗೆ ಒಳಗಾಗುತ್ತಾರೆ. ಬಿಸಿಲು, ಚಳಿ, ಮಳೆಯನ್ನು ಗಮನಕ್ಕಿರಿಸದೆ, ದುಡಿಮೆಯೊಂದನ್ನೆ ಗುರಿಮಾಡಿಕೊಂಡು, ಗಂಡನ ಜೊತೆ ಜೊತೆಯಲ್ಲಿ ಹೆಂಡತಿಯು ದುಡಿಯಲು ತೆರಳುವ ಈ ಪ್ರದೇಶಗಳ ಮಹಿಳೆಯರು ಪದೇ ಪದೇ ರೋಗಗಳಿಗೆ ತುತ್ತಾಗುತ್ತಾರೆ. ಈ ಪ್ರದೇಶಗಳಲ್ಲಿ ವಾಸಿಸುವ ಮಹಿಳೆಯರು ಎದುರಿಸುವ ಆರೋಗ್ಯದ ಸಮಸ್ಯೆಗಳು ಕಾಲರಾ, ಮಲೇರಿಯಾ, ಟಾಯಿಫೈಡ್, ಬಿಸಿಲಲ್ಲಿ ಹೆಚ್ಚು ಕೆಲಸ ಮಾಡುವುದರಿಂದ ಹೆಚ್ಚು ಓಡಾಡುವುದರಿಂದ ಮತ್ತು ಕಲುಷಿತವಾದ ಗಾಳಿಯ ಸೇವನೆಯಿಂದಾಗಿ ಕೆಮ್ಮು, ದಮ್ಮು ಉಂಟಾಗಿ ಆರೋಗ್ಯ ಹದಗೆಡುತ್ತದೆ. ಇಂತಹ ಸಂದರ್ಭದಲ್ಲಿ ಆಸ್ಪತ್ರೆಗೆ ಹೋಗುತ್ತೀರಾ ಎಂದು ಪ್ರಶ್ನಿಸಿದಾಗ ೮೦ ಜನ ಮಹಿಳೆಯರಲ್ಲಿ ಶೇ. ೬೨.೫ರಷ್ಟು ಮಹಿಳೆಯರು ತಮಗೆ ಕಾಯಿಲೆಯಾದಾಗ ಆಸ್ಪತ್ರೆಗೆ ಹೋಗುತ್ತೇವೆಂದು ಉತ್ತರಿಸಿದರು. ಈ ಮಹಿಳೆಯರು ತಮ್ಮ ಆರೋಗ್ಯದ ಕಡೆಗೆ ಗಮನವನ್ನು ಕೊಡುವವರಾಗಿದ್ದು ಕಾಯಿಲೆಯಾದಾಗ ಆಸ್ಪತ್ರೆಗೆ ಹೋಗುತ್ತಾರೆ. ಅನಾರೋಗ್ಯವಿದ್ದರೆ

ದುಡಿಯಲು ಅಸಾಧ್ಯವೆಂದು ಇವರು ನಂಬಿದ್ದಾರೆ. ಇದೇ ಪ್ರದೇಶಗಳಲ್ಲಿ ಶೇ. ೩೭.೫ ರಷ್ಟು ಮಹಿಳೆಯರು ತಮ್ಮ ಆರೋಗ್ಯ ಕೈಕೊಟ್ಟರೂ ಆಸ್ಪತ್ರೆಗೆ ಹೋಗುವುದಿಲ್ಲ, ಆಸ್ಪತ್ರೆಗೆ ಹೋದರೆ ಹಣ ಖರ್ಚಾಗುತ್ತದೆ ಎಂದು, ಒಂದು ವೇಳೆ ಆಸ್ಪತ್ರೆಗೆ ಹೋಗಬೇಕಾದರೂ ಇವರಲ್ಲಿ ಹಣದ ಕೊರತೆ ಇರುವುದರಿಂದ ಆರೋಗ್ಯದೆಡೆಗೆ ನಿರ್ಲಕ್ಷ್ಯವನ್ನು ತೋರಿಸುತ್ತಾರೆ ಎಂದು ಮೇಲಿನ ಕೋಷ್ಟಕದ ಅಂಕಿ-ಅಂಶಗಳ ಶೇಕಡಾವಾರುಗಳಿಂದ ತಿಳಿಸುತ್ತದೆ.

ಅನಾರೋಗ್ಯಕ್ಕೆ ಬಲಿಯಾದಾಗ ಆಸ್ಪತ್ರೆಗೆ ಹೋಗುವವರ ಜೊತೆಗೆ, ನಾಟಿ ಔಷಧವನ್ನು ಪಡೆಯುವ ಮಹಿಳೆಯರ ಪ್ರಮಾಣ ಶೇ. ೨೫ರಷ್ಟಿದೆ. ನಾಟಿ ಔಷಧದೊಂದಿಗೆ, ಮಂತ್ರಶಾಸ್ತ್ರ ಮಾಡಿಸುವ, ಹರಕೆ ಹೊತ್ತುಕೊಳ್ಳುವ, ದೇವರ ಹೆಸರಿನಲ್ಲಿ ಭಂಡಾರ ಹಚ್ಚಿಕೊಳ್ಳುವ ಮಹಿಳೆಯರ ಪ್ರಮಾಣ ಶೇ. ೧೨.೫ರಷ್ಟಿದೆ. ಜಿಲಾನಾಬಾದ ಕೊಳಚೆ ಪ್ರದೇಶದಲ್ಲಿ ಮತ್ತು ಬುದ್ಧ ನಗರದಲ್ಲಿ ಇದರ ಪ್ರಮಾಣ ಹೆಚ್ಚಿದೆ. ಅದೇ ರೀತಿಯಾಗಿ ಕೆಲವು ಮಹಿಳೆಯರು

೧೨. ಆರೋಗ್ಯದಿಂದ ಚೇತರಿಸಿಕೊಳ್ಳಲು ಏನು ಮಾಡುವಿರಿ

| ಕ್ರ.ಸಂ. | ವಿವರ | ಮಹಿಳೆಯರ ಸಂಖ್ಯೆ | ಶೇಕಡಾ |
|---|---|---|---|
| ೧. | ನಾಟಿ ಔಷಧಿ | ೨೦ | ೨೫ |
| ೨. | ಮಂತ್ರಶಾಸ್ತ್ರ, ಹರಕೆ | ೧೦ | ೧೨.೫ |
| ೩. | ಸರ್ಕಾರಿ ಆಸ್ಪತ್ರೆ | ೩೫ | ೪೩.೭೫ |
| ೪. | ಖಾಸಗಿ ಡಾಕ್ಟರು | ೧೫ | ೧೮.೭೫ |
| | ಒಟ್ಟು | ೮೦ | ೧೦೦.೦೦ |

ಮೇಲೆ ತಿಳಿಸಿದ ಕೋಷ್ಟಕದಲ್ಲಿ ತಿಳಿದುಬರುವುದೇನೆಂದರೆ, ಕೊಳಚೆ ಪ್ರದೇಶದಲ್ಲಿರುವ ಮಹಿಳೆಯರು ಆಧುನಿಕ ಪ್ರವೃತ್ತಿಯೊಂದಿಗೆ ಅಂದಾನುಕರಣೆ, ಮೂಢನಂಬಿಕೆಯಲ್ಲಿಯು ಇರುವುದು ತಿಳಿದು ಬರುತ್ತದೆ. 'ಆರೋಗ್ಯವೇ ಭಾಗ್ಯ'ವೆಂದು ನಂಬಿದ್ದಾರೆ. ಆರೋಗ್ಯದಿಂದ ಇದ್ದರೆ ನಾಲ್ಕು ಕಾಸು ಸಂಪಾದಿಸಬಹುದು, ಅನಾರೋಗ್ಯವಿದ್ದರೆ ದುಡಿಯುವುದು ಕಷ್ಟ. ಆದ್ದರಿಂದ ಕಾಯಿಲೆಯಾದಾಗ ಅಂದರೆ ಪ್ರಾಥಮಿಕ ಹಂತದಲ್ಲೇ ಸರ್ಕಾರಿ ಆಸ್ಪತ್ರೆಗೆ ಹೋಗುತ್ತೇವೆ ಎಂದು ಶೇ. ೪೩.೭೫ರಷ್ಟು ಮಹಿಳೆಯರು ಉತ್ತರಿಸಿದರೆ, ಖಾಸಗಿ ಡಾಕ್ಟರರ ಬಳಿಯಲ್ಲಿ ಚಿಕಿತ್ಸೆ ಪಡೆಯುತ್ತೇವೆ ಎಂದು ೧೮.೭೫ ಮಹಿಳೆಯರು ಉತ್ತರಿಸಿದರು.

# ೪. ಗ್ರಂಥಋಣ


೧. ಅಂದನೂರು ಶೋಭಾ ಮತ್ತು ಶ್ರೀಲಕ್ಷ್ಮಿ (ಸಂ) : ಮಹಿಳೆಯ ಮುನ್ನಡೆ, : ವಿ.ಜಿ. ಮಾನಿನಿ ಪ್ರಕಾಶನ, ಬೆಂಗಳೂರು, ೧೯೮೮

೨. ಅನುಸೂಯಾ ಕಾಂಬಳೆ (ಸಂ) : ವಿಚಾರ ಸಾಹಿತ್ಯ ಮತ್ತು ಹೆಣ್ಣು : ವೈಚಾರಿಕ ಸಾಹಿತ್ಯ ಪ್ರಕಾಶನ ಬೆಳಗಾವಿ, ೧೯೯೯

೩. ಆಶಾದೇವಿ ಎಂ.ಎಸ್. : ಸ್ತ್ರೀಮತವನುತ್ತರಿಸಲಾಗದೇ? ಸಾಹಿತ್ಯ ಸಂಸ್ಕೃತಿ ಕುರಿತ ಲೇಖನಗಳು : ಅಕ್ಷರ ಪ್ರಕಾಶನ ಹೆಗ್ಗೋಡು, ಸಾಗರ ಕರ್ನಾಟಕ, ೨೦೦೬

೪. ಇಂದಿರಾ ಆರ್. : ಸ್ತ್ರೀವಾದಿ ವಿಶ್ಲೇಷಣೆ : ಸಮತಾ ಅಧ್ಯಯನ ಕೇಂದ್ರ, ಮೈಸೂರು, ೧೯೯೫

೫. ಇಂದಿರಾ ಕೃಷ್ಣಪ್ಪ : ನಮ್ಮ ಮಗಳು ನಮ್ಮ ಶಕ್ತಿ : ಪ್ರೊ.ಬಿ.ಕೃಷ್ಣಪ್ಪ ಟ್ರಸ್ಟ್ ಬೆಂಗಳೂರು, ೨೦೦೪

೬. ಒಡೆಯರ, ಡಿ.ಹೆಗಡೆ, ಎನ್. ಅನ್ನಪೂರ್ಣೇಶ್ವರಿ : ಮಹಿಳಾ ಅಧ್ಯಯನ, ಆರ್ಥಿಕ ನೆಲೆಗಳು ಮತ್ತು ಆಯಾಮಗಳು : ಮಾನವಾಭಿವೃದ್ಧಿ ಅಧ್ಯಯನಗಳ ಕೇಂದ್ರ ಮೈಸೂರು, ೨೦೦೩

೭. ಕಮಲಾ ಹಂಪನಾ : ಬೊಗಸೆ (ಮಹಿಳೆ ಸುತ್ತ ಮುತ್ತ) : ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೩

೮. ಕಿಶೋರಿ ನಾಯಕ : ಸ್ತ್ರೀವಾದ ನೆಲೆಗಳು ಮತ್ತು ನಿಲುವುಗಳು : ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳ ಗಂಗೋತ್ರಿ, ೧೯೯೯

೯. ಕುಲಕರ್ಣಿ ಆರ್.ಜಿ. (ಅನು) : ಸ್ತ್ರೀ ಶಕ್ತಿ : (ಮೂಲ) ಶ್ರೀ ಅರವಿಂದರು ಮತ್ತು ಶ್ರೀಮಾತೆ, ದ.ರಾ.ಬೇಂದ್ರೆ, ಸ್ನೇಹ ಮಹಲ, ಬೆಂಗಳೂರು, ೧೯೯೮

೧೦. ಗಾಂಧಿ ಎಮ್.ಕೆ. : ಮಹಿಳೆಯರು : ಗಾಂಧಿ ಸ್ಮಾರಕ ನಿಧಿಯ ಕರ್ನಾಟಕಶಾಖೆ, ೧೯೭೬

೧೧. ಗಾಯಿತ್ರಿ ಎನ್. : ಮಹಿಳಾ ಚಳುವಳಿಗಳ ಮಜಲುಗಳು : ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೮

೧೨. ಗಾಯಿತ್ರಿ ಎನ್. : ಮಹಿಳೆ ಬಿಡುಗಡೆಯ ಹಾದಿಯಲ್ಲಿ : ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು, ೧೯೯೧

೧೩. ಗಾಯಿತ್ರಿ ನಾವಡ : ಮಹಿಳಾ ಸಂಕಥನ : ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು, ೨೦೦೩

೧೪. ಗಾಯಿತ್ರಿ ನಾವಡ : ವಿರಚನೆ : ಎನ್.ಆರ್.ಎ.ಎಮ್.ಎಚ್. ಪ್ರಕಾಶನ, ದಕ್ಷಿಣ ಕನ್ನಡ, ೧೯೯೭

೧೫. ಗೀತಾನಾಗಭೂಷಣ : ಕಾಗೆ ಮುಟ್ಟಿತು :

೧೬. ಗೋಪಾಲರಾವ್ ಪಂಡಿತ, ವೈ.ಎಲ್. : ಭಾರತೀಯ ನಾರಿ ಅಂದು-ಇಂದು : ಭೈರವ ಪಬ್ಲಿಕೇಷನ್ಸ್, ಚಿಕ್ಕಮಗಳೂರು, ೨೦೦೦

೧೭. ಗೌಡ ವಿ.ಎಚ್., ಶ್ರೀಮತಿ ಯಶೋದಾ : ಮಹಿಳೆ ಮತ್ತು ಕಾನೂನು : ರಾಗೌ ಟ್ರಸ್ಟ್, ಮೈಸೂರು, ೨೦೦೪

೧೮. ಚಂದ್ರಮತಿ ಸೋಂದೆ : ಹೆಣ್ಣಲ್ಲ ನಮಗ ರವಿಚಿನ್ನ : ಸಾಗರ ಪ್ರಕಾಶನ, ಬೆಂಗಳೂರು, ೨೦೦೫

೧೯. ಚಂದ್ರಶೇಖರ ಟಿ.ಆರ್. : ಮಹಿಳೆ, ಆರ್ಥಿಕತೆ ಮತ್ತು ಅಭಿವೃದ್ಧಿ : ಪ್ರ. ಕ.ವಿ.ವಿ. ಹಂಪಿ, ೨೦೦೧

೨೦. ಚೌಡೇಗೌಡ ಎಂ., ಕೆ.ಶಿವಚಿತ್ತಪ್ಪ, : ಮಹಿಳೆ ಮತ್ತು ಅಭಿವೃದ್ಧಿ : ಚಿನ್ಮಯಿ ಪ್ರಕಾಶನ, ಮೈಸೂರು, ೨೦೦೫

೨೧. ಛಾಯಾದಾತಾರ್ : ಸ್ತ್ರೀ ಪುರುಷ : (ಅನು) ಸರಸ್ವತಿ ರಿಸಬೂಡ : ಇಳಾ ಪ್ರಕಾಶನ, ಬೆಂಗಳೂರು, ೧೯೯೨

೨೨. ಜವರಯ್ಯ ಮ.ನ. : ಅಂಬೇಡ್ಕರ ಮತ್ತು ಸಾಮಾಜಿಕ ನ್ಯಾಯ : ಸಿದ್ಧಾರ್ಥ ಗ್ರಂಥಮಾಲೆ, ಮೈಸೂರು, ೧೯೯೫

೨೩. ಜ್ಯೋತ್ಸ್ನಾ ಕಾಮತ್ : ಮಹಿಳೆ ಅಂದು ಇಂದು : ಪ್ರೇಮಸಾಯಿ ಪ್ರಕಾಶನ, ಬೆಂಗಳೂರು, ೨೦೦೧

೨೪. ಜ್ಯೋತಿ ಶಶಿಕುಮಾರ : ಮಹಿಳಾ ಸಾಮಾಜಿಕತೆ : ಮಹಿಳಾ ಅಧ್ಯಯನ ಕೇಂದ್ರ, ಕ.ವಿ.ವಿ. ಹಂಪಿ, ೨೦೦೭

೨೫. ನಾರಾಯಣವಿಶ್ವ ಎಂ. : ಸಾಮಾಜಿಕ ಸಮಸ್ಯೆಗಳು : ಚೇತನಾ ಬುಕ್ ಹೌಸ್, ಮೈಸೂರು, ೨೦೦೪

೨೬. ನೀಲಮ್ಮ ಕತ್ನಳ್ಳಿ : ಮಹಿಳೆ ಹಲವು ಮುಖಗಳು : ಶ್ರೀ ರೇಣುಕಾ ಪ್ರಕಾಶನ, ಗುಲಬರ್ಗಾ, ೧೯೯೭

೨೭. ನೇಮಿಚಂದ್ರ (ಸಂ) : ಮಹಿಳಾ ಲೋಕ : ನವಕರ್ನಾಟಕ ಪ್ರಕಾಶನ, ೨೦೦೫

೨೮. ಪ್ರೀತಿಶುಭಚಂದ್ರ : ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು : ಪ್ರಸಾರಾಂಗ, ಕ.ವಿ.ವಿ. ಹಂಪಿ, ೨೦೦೨

೨೯. ಪೆರ್ಲ ಮಾ.ಭ. : ಮಹಿಳೆಯ ಮುಖಗಳು : ಕನ್ನಡ ಪ್ರಚಂಡ ಪ್ರಕಾಶನ, ದಕ್ಷಿಣ ಕನ್ನಡ ಜಿಲ್ಲೆ, ೨೦೦೧

೩೦. ಮೀರಾ ಎಲ್.ಜಿ. (ಅನು) : ಮಾನುಷೀಯ ಮಾತು : (ಮೂಲ) ಮಧುಕೇಶ್ವರ, ಅಕ್ಷರ ಪ್ರಕಾಶನ, ೧೯೯೭

೩೧. ಮುಳಗುಂದ ಚ.ವಿ. (ಸಂ) : ಆಧುನಿಕ ಮಹಿಳೆ ಮತ್ತು ಸಮಾಜ : ಎಚ್.ವಿ.ನಾಗೇಶ್ವ ಮಾತೋಶ್ರೀ ಪ್ರಕಾಶನ, ಮುದ್ದೇಬಿಹಾಳ, ೧೯೮೬

೩೨. ಮೂರ್ತಿಶ್ವರಯ್ಯ ಜಿ.ಕಾ. : ಮಹಿಳೆ ಸಮಾಜ ಮತ್ತು ಕಾನೂನು : ಸ್ವಪ್ನ ಬುಕ್ ಹೌಸ್ ಬೆಂ. ೨೦೦೦

೩೩. ರಾಜಶೇಖರ್ ಎಸ್. : ಸಾಮಾಜಿಕ ಸಮಸ್ಯೆಗಳು : ಭ್ರಮರ ಪ್ರಕಾಶನ, ಶಿವಮೊಗ್ಗ, ೨೦೦೦

೩೪. ರೋಹಿಣಿ ಬಿ.ಎಂ. : ಸ್ತ್ರೀ ಸಂವೇದನೆ : ಹೇಮಾಂಶು ಪ್ರಕಾಶನ, ಮಂಗಳೂರು, ೧೯೯೫

೩೫. ರೋಹಿಣಿ ಬಿ.ಎಂ. : ಸ್ತ್ರೀ, ಸಂಸ್ಕೃತಿ ಶಿಕ್ಷಣ : ಹೇಮಾಂಶು ಪ್ರಕಾಶನ, ಮಂಗಳೂರು, ೨೦೦೦

೩೬. ವೆಂಕಟೇಶ ಕೆ. (ಸಂ) : ಅಂಬೇಡ್ಕರ ಒಂದು ಮರು ವ್ಯಾಖ್ಯಾನ : ಸುಭಾಷ್ ಭರಣಿ, ಸಾಂಸ್ಕೃತಿಕ ವೇದಿಕೆ ಬಳ್ಳಾರಿ, ೨೦೦೫

೩೭. ವೆಂಕಟಲಕ್ಷ್ಮಿ ಬಿ.ಎಸ್. : ಬದುಕು ಬವಣೆ ಭರವಸೆ : ಎಸ್.ಟಿ.ಶಾಂ ಪ್ರಕಾಶನ, ಬೆಂಗಳೂರು

೩೮. ವೆಂಕೋಬರಾವ, ಡಿ. : ನ್ಯಾಯಕ್ಕಾಗಿ ಮಹಿಳೆಯರ ಹೋರಾಟ : ದಿವ್ಯಚಂದ್ರ ಪ್ರಕಾಶನ, ಬೆಂಗಳೂರು, ೨೦೦೦೫೪.

೩೯. ವಿಜಯಶ್ರೀ ಸಬರದ : ಜಾನಪದ ಮತ್ತು ಮಹಿಳೆ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೬

೪೦. ವಿಜಯಶ್ರೀ ಸಬರದ (ಸಂ) : ಮಹಿಳೆ ಶೋಷಣೆ ಸವಾಲುಗಳು : ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೫

೪೧. ವಿಜಯಾ : ನಿಜಧ್ಯಾನ : ಪ್ರೆಸ್‌ಕ್ಲಬ್ ಪ್ರಕಾಶನ, ಬೆಂಗಳೂರು, ೨೦೦೫

೪೨. ವಿನೋಭಾ : ಸ್ತ್ರೀ ಶಕ್ತಿ : ಭೂದಾನ ಕಾರ್ಯಾಲಯ, ಪ್ರಕಾಶನ, ಬೆಳಗಾಂ, ೧೯೬೯

೪೩. ವಿಶ್ವನಾಥ ಕಾರ್ನಾಡ : ಸಮಚಿತ್ತ : ನವೀನ ಪ್ರಿಂಟರ್ಸ್, ೨೦೦೪

೪೪. ವೈದೇಹಿ (ಅನು) : ಬೆಳ್ಳಿಯ ಸಂಕೋಲೆಗಳು : (ಮೂಲ) ಮೈತ್ರೇಯಿ ಮುಖ್ಯೋಪಾಧ್ಯಾಯ, ಅಕ್ಷರ ಪ್ರಕಾಶನ ಸಾಗರ ಕರ್ನಾಟಕ ರಾಜ್ಯ, ೧೯೮೫

೪೫. ಶಮಂತ : ದುಡಿತ ಮಿಡಿತ : ಆಯ್.ಬಿ.ಎಚ್.ಪ್ರಕಾಶನ, ಬೆಂಗಳೂರು, ೨೦೦೧

೪೬. ಶಾಂತಾ ಇಮ್ರಾಪೂರ : ಧರ್ಮ ಮಹಿಳೆ ಮತ್ತು ಸಮಾಜ : ಚೇತನಾ ಪ್ರಕಾಶನ, ಧಾರವಾಡ, ೨೦೦೧

೪೭. ಶಾಂತಾ ಇಮ್ರಾಪೂರ : ಮಹಿಳೆ ಸಾಹಿತ್ಯ ಸಂಸ್ಕೃತಿ : ಚೇತನಾ ಪ್ರಕಾಶನ, ಧಾರವಾಡ, ೨೦೦೧

೪೮. ಶ್ಯಾಂಚರಣ ದುಬೆ : ಭಾರತೀಯ ಸಮಾಜ : ನ್ಯಾಷನಲ್ ಬುಕ್ ಟ್ರಸ್ಟ್ ಇಂಡಿಯಾ, ೧೯೯೦

೪೯. ಶ್ರೀಮತಿ ಎಚ್.ಎಸ್. : ಚಹರೆ : ಇಳಾ ಪ್ರಕಾಶನ, ಬೆಂಗಳೂರು

೫೦. ಶ್ರೀಮತಿ ಎಚ್.ಎಸ್. : ಗೌರಿದುಃಖ : ಶಕ್ತಿ ಪ್ರಿಂಟರ್ಸ್ ಅಂಡ ಪಬ್ಲಿಕೇಷನ್ಸ್ ಬೆಂಗಳೂರು

೫೧. ಶ್ರೀಮತಿ ಎಚ್.ಎಸ್. : ಹೆಣ್ಣು ಹೆಂಗಸು : ಬಾಲ್ಯದಕೆರೆ ಪ್ರಕಾಶನ, ಮಂಡ್ಯ, ೨೦೦೪

೫೨. ಶ್ರೀಮತಿ ಎಚ್.ಎಸ್. : ಸ್ತ್ರೀವಾದ : ಪ್ರಸಾರಾಂಗ, ಕ.ವಿ.ವಿ. ಹಂಪಿ, ೨೦೦೩

೫೩. ಶ್ರೀಮತಿ ಎಚ್.ಎಸ್. (ಸಂ) : ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ : ಪ್ರಸಾರಾಂಗ, ಕ.ವಿ.ವಿ. ಹಂಪಿ

೫೪. ಶೈಲಜಾ ಹಿರೇಮಠ : ಪಾತರದವರು : ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೧೯೯೯

೫೫. ಶೈಲಜಾ ಹಿರೇಮಠ : ಸ್ತ್ರೀ ಕಥನ : ಭುವನ ಪ್ರಕಾಶನ, ಹೊಸಪೇಟೆ, ೨೦೦೩

೫೬. ಸಂಧ್ಯಾರೆಡ್ಡಿ ಕೆ.ಆರ್. : ಮಹಿಳಾ ಜಾನಪದ : (ಸಂ) ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ

೫೭. ಸಮತಾ ದೇಶಮಾನೆ : ಸಮಾಜಶಾಸ್ತ್ರ ಮತ್ತು ಮಹಿಳೆ : ಚೇತನಾ ಬುಕ್‌ಹೌಸ್, ಮೈಸೂರು, ೨೦೦೩

೫೮. ಸರೋಜಾ ಕೆ. : ಮಹಿಳೆ ಮತ್ತು ಆರೋಗ್ಯ : ಪ್ರಸಾರಾಂಗ, ಕ.ವಿ.ವಿ, ಹಂಪಿ, ೨೦೦೭

೫೯. ಸಾವಿತ್ರಿ ಕೆ. : ಕೊಳಚೆ ಪ್ರದೇಶದಲ್ಲಿ ಮಹಿಳೆಯರು : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೨

೬೦. ಸುನಂದಮ್ಮ ಆರ್. : ಮಹಿಳಾ ಸಂಸ್ಕೃತಿ : ಸಮತಾ ಅಧ್ಯಯನ ಕೇಂದ್ರ, ಮೈಸೂರು, ೨೦೦೫

೬೧. ಸುಮಿತ್ರಾಬಾಯಿ ಬಿ.ಎನ್., ವಿಜಯಾದಬ್ಬೆ (ಅನು) : ವಿಮೋಚನೆಯೆಡೆಗೆ : (ಮೂಲ) ಮೈಥಿಲಿ ಶಿವರಾಮನ್ : ಮಂಜುಶ್ರೀ ಮುದ್ರಣ, ಮೈಸೂರು, ೧೯೮೬

೬೨. ಸುಮಿತ್ರಾಬಾಯಿ ಬಿ.ಎನ್., ವಿಜಯಾದಬ್ಬೆ (ಅನು) : ವಿಮೋಚನೆಯೆಡೆಗೆ : (ಮೂಲ) ಮೈಥಿಲಿ ಶಿವರಾಮನ್ : ಮಂಜುಶ್ರೀ ಮುದ್ರಣ, ಮೈಸೂರು, ೧೯೮೬

೬೩. ಸೋಮಣ್ಣ ಜೆ. (ಸಂ) : ಅಂಬೇಡ್ಕರ್ ಮತ್ತು ಸಾಮಾಜಿಕ ನ್ಯಾಯ : ಚೇತನಾಬುಕ್ ಹೌಸ್ ಮೈಸೂರು, ೨೦೦೩

೬೪. ಹೇಮಲತಾ ಮಹಿಷಿ : ಇಪ್ಪತ್ತೊಂದನೆಯ ಶತಮಾನದ ಮಹಿಳೆ : ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೯

೬೫. ಹೇಮಲತಾ ಎಚ್.ಎಮ್. : ಮಹಿಳಾ ಅಧ್ಯಯನ (ಭಾಗ, ೧, ೨, ೩) ಡಿ.ವಿ.ಕೆ.ಮೂರ್ತಿ, ಮೈಸೂರು ೪, ೨೦೦೪

೬೬. ಆಧುನಿಕ ಸಮಾಜ ಹಾಗೂ ಕೌಟುಂಬಿಕ ಜೀವನದ ಬದಲಾವಣೆಗಳು, ಆರು ಉಪನ್ಯಾಸಗಳು : ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೬

## ೨. ಸಂಚಿಕೆಗಳು

ಮಹಿಳಾ ಅಧ್ಯಯನ : (ಸಂ.) ಎಚ್.ಎಸ್.ಶ್ರೀಮತಿ, ಪ್ರಸಾರಾಂಗ, ಕ.ವಿ.ವಿ.ಹಂಪಿ, ೨೦೦೦

ಮಹಿಳಾ ಅಧ್ಯಯನ : ಸಂಪುಟ ೨, ಸಂಚಿಕೆ ೨, (ಸಂ.) ಎಚ್.ಎಸ್.ಶ್ರೀಮತಿ, ಪ್ರಸಾರಾಂಗ, ಕ.ವಿ.ವಿ ಹಂಪಿ, ೨೦೦೦

ಮಹಿಳಾ ಅಧ್ಯಯನ (ವಿಶೇಷ ಸಂಚಿಕೆ) (ಸಂ.) ಎಚ್.ಎಸ್.ಶ್ರೀಮತಿ, ಪ್ರ.ಕ.ವಿ.ವಿ. ೨೦೦೧

ಮಹಿಳಾ ಅಧ್ಯಯನ : (ಸಂಪುಟ ೫, ಸಂಚಿಕೆ ೧ ೨) (ಸಂ.) ಎಂ.ಉಷಾ. ಪ್ರ.ಕ.ವಿ.ವಿ.ಹಂಪಿ, ೨೦೦೩

ಮಹಿಳಾ ಅಧ್ಯಯನ : (ಸಂಪುಟ ೬ ಸಂಚಿಕೆ ೧-೨) (ಸಂ.) ಶಿವಾನಂದ ವಿರಕ್ತಮಠ ಪ್ರ. ಕ.ವಿ.ವಿ. ಹಂಪಿ, ೨೦೦೪

ಮಹಿಳಾ ಅಧ್ಯಯನ : (ಸಂಪುಟ ೮, ಸಂಚಿಕೆ ೧) (ಸಂ.) ಶೈಲಜಾ ಹಿರೇಮಠ ಪ್ರ.ಕ.ವಿ.ವಿ. ಹಂಪಿ, ೨೦೦೬

೩. ತ್ರೈಮಾಸಿಕ ವಾರ್ತಾ ಪತ್ರ

ಹೆಜ್ಜೆ ಗುರುತು (ಸಂಪುಟ ೧, ಸಂ ೧) ೨೦೦೬ ಮ.ಅ.ಕೇಂದ್ರ, ಕ.ವಿ.ವಿ. ಹಂಪಿ

ಹೆಜ್ಜೆ ಗುರುತು (ಸಂಪುಟ ೧, ಸಂ. ೩-೪) ೨೦೦೬-೦೭ ಮ.ಅ.ಕೇಂದ್ರ, ಕ.ವಿ.ವಿ. ಹಂಪಿ

೪. ಪತ್ರಿಕೆಗಳು

ಸ್ಲಂ ಜಗತ್ತು (ಫೆಬ್ರುವರಿ ೨೦೦೭ರ ಪತ್ರಿಕೆ)

ಪ್ರಜಾವಾಣಿ

ಸಂಯುಕ್ತ ಕರ್ನಾಟಕ

೫. ವಿಶ್ವಕೋಶ

ರಹಮತ್ ತರಿಕೆರೆ (ಸಂ) : ಧರ್ಮ ೩ : ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ.

